# ಅಪರಂಜಿ

ಸಂಪುಟ ೫
ಏಪ್ರಿಲ್ ೧೯೮೮
ಸಂಚಿಕೆ ೭

ತಿಳಿನಗೆಯ ಕಾರಂಜಿ



## ಯುಗಾದಿ ವಿಶೇಷಾಂಕ

- ಆನಂದ್
- ಜಿ. ರಾಮಣ್ಣನ್ಯಾಕ್ ಆಲೆಟ್ಟಿ
- ಸ. ಹಾಲಪ್ಪ
- ಗಾಯತ್ರಿ
- ಎಚ್. ಡುಂಡಿರಾಜ್
- ಕುಮಾರ್
- ಶಾಂತಾ ರಘು
- ಹನುಮಪ್ಪ
- ಎಚ್. ಎಲ್. ಕೇಶವಮೂರ್ತಿ
- ಶಿವು
- ಅ. ರಾ. ಸೇ.
- ಶೈಲಜಾ ಪ್ರಭಾಕರ
- ಬಿ. ಮಾಲಿನಿ ಮಲ್ಯ

ಬಿಡಿಪ್ರತಿ : ಕೇವಲ ಒಂದೂವರೆ ರೂಪಾಯಿ




(ಕಿಲಕಿಲನಗೆಯ ಕಾರಂಜಿ)

ಸಂಪುಟ–೫ ಏಪ್ರಿಲ್ ೧೯೮೮ ಸಂಚಿಕೆ–೨

ಚಂದಾ ವಿವರ :

ಬಿಡಿ ಪ್ರತಿ :
ಒಂದೂವರೆ ರೂಪಾಯಿ

ವಾರ್ಷಿಕ ಚಂದಾ : 15 ರೂ.
ಆಜೀವ ಚಂದಾ : 150 ರೂ.
ಪೋಷಕರು : 500 ರೂ.

ಗೌರವ ಸಲಹೆಗಾರರು :
ಶ್ರೀ ಅ. ರಾ. ಸೇ.
ಶ್ರೀ ಶೇಷಗಿರಿ

ವಿಳಾಸ :
ಅಪರಂಜಿ ಕಾರ್ಯಾಲಯ
119 [ಹಳೆಯ 36]
6ನೆ ಮುಖ್ಯ ರಸ್ತೆ
ಮಲ್ಲೇಶ್ವರಂ
ಬೆಂಗಳೂರು 560003

ಸಂಪಾದಕ :
ಶಿವಕುಮಾರ್

## ಶು ಭಾ ಶ ಯ ಗ ಳು

ಇಂದು ವಿಭವ ಯುಗಾದಿ. ಈ ಪತ್ರಿಕೆ ನಿಮ್ಮ ಕೈ ಸೇರುವಷ್ಟರಲ್ಲಿ ಯುಗಾದಿ ಬಂದು, ಹೊಸ ವರ್ಷ ಪ್ರಾರಂಭವಾಗಿರುತ್ತದೆ. ವಿಭವನಾಮ ಸಂವತ್ಸರದಲ್ಲಿ, ಭಗವಂತನು, ನಮ್ಮ ಎಲ್ಲ ಬರಹಗಾರರಿಗೂ. ಜಾಹಿರಾತುದಾರರಿಗೂ, ಮುದ್ರಕರಿಗೂ ಹಾಗೂ ಓದುಗರೆಲ್ಲರಿಗೂ ಸಕಲ ಸನ್ಮಂಗಳವನ್ನುಂಟುಮಾಡಲೆಂದು, ಅಪರಂಜಿ ದೈನ್ಯತೆಯಿಂದ ಪ್ರಾರ್ಥಿಸುತ್ತಾಳೆ.

ಈ ಸಂಚಿಕೆಯಲ್ಲಿ.........



ಯುಗಾದಿ ಉಡುಗೊರೆ

ಏಪ್ರಿಲ್ 1945ರ ಕೊರವಂಜಿಯಿಂದ ಆರ್. ಕೆ. ಲಕ್ಷ್ಮಣ್ ಅವರ
ಎರಡು ವ್ಯಂಗ್ಯ ಚಿತ್ರಗಳನ್ನು ವರ್ಣಸಹಿತವಾಗಿ ಈ ಸಂಚಿಕೆಯಲ್ಲಿ ನೀಡಿದೆ.


ಮುದ್ರಣ : ಇಂಪ್ರೆಷನ್ಸ್ ಪ್ರಿಂಟರ್ಸ್, ಮಲ್ಲೇಶ್ವರಂ,
ಬೆಂಗಳೂರು–3. ದೂರವಾಣಿ 363444

# ಅಪರಂಜಿ

(ತಿಳಿನಗೆಯ ಕಾರಂಜಿ)

ಸಂಪುಟ ೫ ಏಪ್ರಿಲ್ ೮೮ ಸಂಚಿಕೆ ೭

---

**ಪೂಜ್ಯರಾದ ತಾವು ಮತ್ತೂ ನನಗೆ ತಿಳಿಸಿಕೊಡಬೇಕು.**

—ಛಾಂದೋಗ್ಯ

---

ಬ್ರಹ್ಮವೇ ನೀನೆಂದು ತಂದೆಯಾದ ಉದ್ದಾಲಕ ಆರುಣಿಯು ತಿಳಿಸಿದಾಗ ಶ್ವೇತಕೇತುವು ನಾಲ್ಕೆಂಟು ಬಾರಿ ಹೀಗೆ ಕೇಳುತ್ತಾನೆ.

ನಾವೂ ಕೇಳುತ್ತೇವೆ. ಜಾತ್ಯತೀತತೆ ಎಂದರೇನು ? ದೇಶ ಪ್ರೇಮ ಎಂದರೇನು ? ಭಾವೈಕ್ಯತೆ ಎಂದರೇನು ? ದೃಢಸಂಕಲ್ಪದ ಬೆಲೆಯೇನು ? ಲೆಕ್ಕವಿಲ್ಲದಷ್ಟು ಆಯೋಗಗಳ ಅಸಂಖ್ಯಾತ ವರದಿಗಳ ಗತಿಯೇನಾಯಿತು ? ಪ್ರಜೆಗಳಿಂದ ಮುಚ್ಚಿಡಬೇಕಾದುದಾವುದು, ಏಕೆ, ಇನ್ನೂ ಎಷ್ಟು ಕಾಲ ? ಪ್ರಗತಿಯಿಂದ ನಮಗೇನಾಗಿದೆ ? ಕರೆಗಳು ಯಾರ ಕಿವಿಗೆ ತಾಕಿದವು ?

ಪೂಜ್ಯರೆ, ತಾವು ನಮಗೆ ಮತ್ತೆ ಮತ್ತೆ ತಿಳಿಸಬೇಕು; ಏಕೆಂದರೆ ನಿನ್ನ ಜಾತಿಯಾವುದೆಂದು ನಾವು ಎಂದೂ ಯಾರನ್ನೂ ಕೇಳಿಲ್ಲ. ಪ್ರಜಾವರ್ಗದ ಗುಂಪುಗಳು ವಿದ್ವೇಷ ಕಾರಿದರೂ ನಾವು ಸುಮ್ಮನಿದ್ದೇವೆ. ನಾವು ಭಾವೈಕ್ಯತೆಯನ್ನೇ ನಮ್ಮ ಉಸಿರಾಗಿಸಿಕೊಂಡಿದ್ದೇವೆ. ನಮಗೆ ಹೇಳಬೇಕಾದುದು ಬೆಟ್ಟದೆತ್ತರವಿದ್ದರೂ ಬಲವಂತದಿಂದ ಕೇಳಲು ಬಯಸುತ್ತಿಲ್ಲ.

ಹಾಗಾದರ ನಮ್ಮ ಗತಿಯೇನು ?

**ಪೂಜ್ಯರೆ, ತಾವು ಮತ್ತೂ ನಮಗೆತಿಳಿಸಬೇಕು.,**



# ಅಪರಂಜಿ ಕಿಡಿ

—ಆನಂದ್

---

ನಗುವಿನ ಕವಚ ಧರಿಸಿರುವ ನನಗೇತರ ಭಯ ಅಂತ ಅಪರಂಜಿ ಹೊಸ ವರ್ಷಕ್ಕೆ ಕಾಲಿಟ್ಟಳಂತೆ !

* * * *

ರಾಜ್ಯಪಾಲರು ಕೇಂದ್ರದ ಏಜೆಂಟರಲ್ಲ.

—ಶ್ರೀ ಖುರಾನ

ಇದು ಅವರಿಗೆ ರಾಜೀನಾಮೆಯ ಮುನ್ನ ತಿಳಿಯದಿದ್ದದ್ದು ವಿಷಾದಕರ !

* * * *

ಚುನಾವಣೆ ಕಾಲಕ್ಕೆ ಪ್ರತಿಪಕ್ಷ ಕಾರ್ಯಕ್ರಮ ಸಿದ್ಧ.

—ಶ್ರೀ ವಿ. ಪಿ. ಸಿಂಗ್

ಸರಿ, ಸಂತೆ ಹೊತ್ತಿಗೆ.........!

* * * *

ರಾಷ್ಟ್ರಪತಿಗೇ ಕೈಕೊಟ್ಟ ಮೈಕ್ !

—ಪತ್ರಿಕೆ

ಇದರಿಂದ ಪ್ರತಿ–ಧ್ವನಿಯಾಗದಿದ್ದರೆ ಸಾಕು !

* * * *

126 ಗಂಟೆ ಈಜಿ ಶಿಕ್ಷಕರಿಂದ ದಾಖಲೆ.

—ಸುದ್ದಿ

ಪಾಪ, ಹುಡುಗರಿಂದ ತಪ್ಪಿಸಿಕೊಳ್ಳುತ್ತಿದ್ದರೇನೋ ?

* * * *

7484 ಕೋಟಿ ರೂ. ಖೋತಾ ಬಜೆಟ್

—ಪತ್ರಿಕೆ

ಹಾಗಾದರೆ ನಾನೊಬ್ಬ ಸರಿಯಾಗಿ ವರಮಾನ ತೆರಿಗೆ ಕೊಟ್ರೂ ಪ್ರಯೋಜನ ಇಲ್ಲ ಅಂತ ನಮ್ಮ ಸ್ನೇಹಿತನೊಬ್ಬ ಖುಷಿಪಟ್ಟನಂತೆ !

* * * *

ಚೀನಾದಲ್ಲಿ ಒಬ್ಬಾತನ ಮೈಯಿಂದ ಕರೆಂಟ್ ಉತ್ಪತ್ತಿಯಾಗುತ್ತಿದೆ.

—ಸುದ್ದಿ

ಅವನನ್ನ ಬೆಂಗಳೂರಿಗಾದರೂ ಕರೆಸಬಹುದು !

* * * *

ತಮ್ಮ ಬುದ್ಧಿಶಕ್ತಿಯಿಂದ ಕಾರ್ಯನಿರತ ಪತ್ರಕರ್ತರು ದೇಶಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ.

—ಹಣಕಾಸು ಸಚಿವ ತಿವಾರಿ

ಇದು ಅವರ ಲೆಕ್ಕಕ್ಕೆ ಬಂದಿದ್ದು ಆಶ್ಚರ್ಯಕರ !

* * * *

ಟೆಲಿ ಸಂಪರ್ಕ ತಂತ್ರ ತಜ್ಞರ ಮುಷ್ಕರ ಅಂತ್ಯ.

—ಸುದ್ದಿ

ಸದ್ಯ, ಈಗ ರಾಂಗ್ ನಂಬರ್ ಆದರೂ ಸಿಕ್ಕಬಹುದು !

# ಸಕಲ ರೋಗ ನಿವಾರಿಣಿ

**ಜಿ. ರಾಮಣ್ಣ ನ್ಯಾಕ್ ಆಲೆಟ್ಟಿ**

---

ಅಪರಂಜಿಗೆ ಕಳುಹಿಸಿದ ಲೇಖನ ಪ್ರಕಟವಾಗಿಲ್ಲವೆಂಬ ಚಿಂತೆಯಿಂದ ಭಾರವಾದ ಹೆಜ್ಜೆಗಳನ್ನಿಡುತ್ತಾ ಕೆಂಪೇಗೌಡ ರಸ್ತೆಯಲ್ಲಿ ನಡೆಯುತ್ತಾ ಇದ್ದೆ. "ರೀ ಸ್ವಾಮಿ, ಬರ್ರಿ ಇಲ್ಲಿ .. ಅದಲ್ಲ ಬರ್ರಿ" ಎಂದು ಹೆಂಗಸೊಬ್ಬಳು ನನ್ನನ್ನು ಕರೆದಾಗ ಬೆಚ್ಚಿ ಬೀಳುವಂತಾಯಿತು. 'ಅದಲ್ಲ ಬರ್ರಿ ಅಂದರೆ ಇನ್ನ್ಯಾವುದಕ್ಕಿರಬಹುದು ಎಂದು ಕ್ಷಣ ಕಾಲ ಯೋಚಿಸಿ ಅವಳ ಬಳಿಗೆ ಹೋದೆ. "ನೋಡ್ರಿ ಸಾಹೇಬ್ರಾ ಕೂದ್ಲು ಭಾಳ ಉದುರ್ತ್ಯಾವ" ಎಂದು ನನ್ನ ತಲೆಗೆ ಬೆರಳು ತೋರಿದಳು. ತಲೆ ಮುಟ್ಟಿಕೊಂಡೆ. ಬೇಸಿಗೆಯ ಬೋಳು ಮರದಂತಿದ್ದ ತಲೆಯಲ್ಲಿ ಇದ್ದ ಕೂದಲುಗಳು ತಟಸ್ಥವಾಗಿದ್ದವು. "ಹೋಗಲಿ ಬಿಡಮ್ಮ, ವಯಸ್ಸಾಯಿತು, ಇನ್ನು ಕೂದಲಿನಿಂದ ಏನು ಆಗಬೇಕಾಗಿದೆ ?" ಎಂದು ತಾತ್ಸಾರವಾಗಿಯೇ ಹೇಳಿದೆ. "ಈ ತೈಲ ಹಚ್ರೆಲಾ, ರೊಕ್ಕದ ಚಿಂತಿ ಮಾಡಬ್ಯಾಡ್ರಿ" ಎಂದು ಒಂದು ಸೀಸೆಯನ್ನು ಕೊಡ ಬಂದಳು. "ಬೇಡ ಬಿಡಮ್ಮ, ನನಗೇನೋ ಚಿಂತೆ, ಹೋಗಲಿ ಬಿಡು" ಎಂದು ಹೇಳಿ ಒಂದೆರಡು ಹೆಜ್ಜೆ ಹಾಕಿದೆ. ಆಕೆ ಹಿಂದಿನಿಂದಲೇ ಬಂದು "ಚಿಂತಿ ಯಾಕ ಮತ್ತ ? ಕಾರಣ ಹೇಳ್ರಿಲಾ" ಎಂದು ಜೊತೆಯಲ್ಲಿಯೇ ಬಂದಳು. ಇದೊಳ್ಳೇ ಗ್ರಹಚಾರ ಬಂತಲ್ಲ ಎಂದು ಮನಸ್ಸಿನಲ್ಲಿಯೇ ಅಂದುಕೊಂಡೆ. "ಮನಿಯಾಕೆಯೊಡನೆ ಜಗಳ ಏನ್ರಿ ಮತ್ತ ?" ಎಂದು ನಿಧಾನವಾಗಿಯೇ ಕೇಳಿದಳು. ಹೌದು ಎಂದರೆ ಅವಳ ಬಾಯಿಯಿಂದ ಏನು ಬರುತ್ತದೆಯೋ ನೋಡೋಣವೆಂದು 'ಹೌದು' ಎಂದು ಹೂಂಕರಿಸಿದೆ. "ಈ ತಾಯಿತ ಕಟ್ಕೊಳ್ರಿ ಮತ್ತ ನಿಮ್ಮಾಕಿ ಹಸುವಾಗ್ತಾಳ" ಎಂದು ಚೀಲದಿಂದ ತಾಯಿತ ತೆಗೆದಳು. "ಅಯ್ಯಯ್ಯೋ ನಮ್ಮಾಕೆ ಹಸುವಾದ್ರೆ ನನ್ನ ಗತಿಯೇನಮ್ಮಾ ?" ಎಂದು ನಗೆಯಾಡಿದೆ. "ಅಂಗಲ್ರೀ, ನಿಮ್ಮಾಕಿ ಹಸುವಿನಂಗೆ ಸಾಧು ಗುಣದವಳಾಗ್ತಾಳ್ರೀ" ಎಂದು ತನ್ನ ತಾಯಿತದ ವರ್ಣನೆ ಮಾಡತೊಡಗಿದಳು. "ಅದಲ್ಲಮ್ಮಾ, ನಾನೊಬ್ಬ ಕಥೆಗಾರ. ನಾನು ಬರೆದ ಕಥ ಮಾಸಪತ್ರಿಕೆಯಲ್ಲಿ ಅಚ್ಚಾಗಿಲ್ಲ. ಅದಕ್ಕೆ ಬಹಳ ಬೇಸರದಿಂದಿದ್ದೇನೆ. ಅಷ್ಟೆ" ಅಂದೆ. "ಚಿಂತಿ ಮಾಡ್ಬ್ಯಾಡ್ರಿ, ಈ ನೂಲು ಕಟ್ಕೊಳ್ರಿ ನಿಮ್ಮ ಕಥೆಯೆಲ್ಲಾ ಅಚ್ಚಾಗ್ತಾವು" ಎಂದು ಚೀಲದಿಂದ ಕಪ್ಪು ನೂಲೊಂದನ್ನು ತೆಗೆದಳು. ಸಕಲ ಸಮಸ್ಯೆಗಳಿಗೂ ಪರಿಹಾರ ಸೂಚಿಸುವ ಆಕೆಯ ಮಾತುಗಳನ್ನು ಕೇಳಿ ಒಳಗಿಂದೊಳಗೇ

ನಗು ಬಂದರೂ ಅದನ್ನು ತೋರ್ಪಡಿಸದೆ "ಆ ನೂಲಿಗೆ ರೊಕ್ಕ ಎಷ್ಟವ್ವಾ ?" ಎಂದು ಕೇಳಿದೆ. "ರೊಕ್ಕದ ಚಿಂತಿ ಬ್ಯಾಡ್ರಿ ಕೈ ಸರ್ರಿ ಮತ್ತ" ಎಂದು ಕೈಗೆ ನೂಲು ಕಟ್ಟಿಯೇ ಬಿಟ್ಟಳು !

ಬಹಳ ಹೊತ್ತಿನಿಂದ ತಲೆ ತಿಂದ್ಳಲ್ಲಾ ಎಂದು ಎರಡು ರೂಪಾಯಿ ನೋಟು ಕೊಟ್ಟೆ. ಆಕೆ ನಿರಾಕರಿಸಿದಳು. "ನೂಲಿಗೆ ಐವತ್ತು ರೂಪ್ಯಾ ಆಗ್ತೈತೆ. ನೀವು ಭಾಳ ಒಳ್ಳೇ ಮನುಷ್ಯ ಇದ್ದೀರಿ. ಅದಕ್ಕೆ ಇಪ್ಪತ್ತು ರೂಪಾಯಿ ಕೊಡ್ರಿ ಮತ್ತ" ಎಂದು ಹಠ ಮಾಡತೊಡಗಿದಳು. ನೂಲು ಬೇಡವೆಂದು ಬಿಚ್ಚಲು ಹೋದಾಗ ಹತ್ತಾರು ದೇವರುಗಳ ಹೆಸರು ಹೇಳಿ ಆಣೆ ಮಾಡಿದಳು. ಬ್ಯಾಗು ಜೇಬು ಎಲ್ಲಾ ಹುಡುಕಿ ಹತ್ತು ರೂಪಾಯಿ ಕೊಟ್ಟು ಅವಳಿಂದ ಕಳಚಿಕೊಳ್ಳಬೇಕಾದರೆ ಸಾಕು ಸಾಕಾಯಿತು. ವೇಗವಾಗಿ ನಡೆದು ಬಸ್ ಸ್ಟಾಪಿಗೆ ಹೋದೆ. ಅದೃಷ್ಟವಶಾತ್ ಎರಡು ರೂಪಾಯಿ ನೋಟು ಕೈಬಿಟ್ಟಿರಲಿಲ್ಲ. ನಡೆದ ವಿಷಯವನ್ನು ಮನೆಯಲ್ಲಿ ತಿಳಿಸಿದರೆ ಹೆಂಡತಿಯಿಂದಲೂ ಛೀಮಾರಿಯಾಗುವುದೆಂದು ಅವಳು ಕಟ್ಟಿದ್ದ ನೂಲನ್ನು ತುಂಡು ಮಾಡಿ ಬಸ್ಸಿಂದ ಹೊರಗೆ ಬಿಸಾಕಿ ತಲೆಯಲ್ಲಿ ಚಿಮ್ಮಿದ ಬೆವರನ್ನು ಒರೆಸುತ್ತ ಕುಳಿತೆ !

[ನೂಲಿನ ಮಹಿಮೆ ಈಗ್ಲಾದ್ರೂ ಗೊತ್ತಾತೇನ್ರಪಾ !—ಸಂ.]



---

ವೈದ್ಯ — "ಕಿಟಕಿಗಳನ್ನೆಲ್ಲಾ ತೆರೆದು ಮಲಗಿದ್ದೀರಿ ತಾನೆ ?"

ರೋಗಿ — "ಹೌದು ಡಾಕ್ಟರೆ"

ವೈದ್ಯ — "ಹಾಗಾದರೆ ಉಬ್ಬಸ ಕಡಿಮೆಯಾಗಿ, ನಿದ್ದೆ ಬಂದು ಕೆಮ್ಮು ಹೋಗಿರಬೇಕು."

ರೋಗಿ — "ಹೌದು ಡಾಕ್ಟರೆ, ಕೆಮ್ಮಿನ ಜೊತೆ ನನ್ನ ಕನ್ನಡಕ, ಕಟ್ಟಿಸಿ ಕೊಂಡಿದ್ದ ಹಲ್ಲು, ಕೈ ಗಡಿಯಾರ, ಹಣದ ಚೀಲ ಎಲ್ಲವೂ ಹೋಯ್ತು"

---

# ನಮಸ್ಕಾರ !!

—ಸ. ಹಾಲಪ್ಪ

---

ಎಲ್ಲರಿಗೂ ನಮಸ್ಕಾರ ! ಈ ನಮಸ್ಕಾರ, ನಮಸ್ತೆ, ದಯಾವಸ್ಕಿ, ವಂದನೆ, ವಣಕ್ಕುಂ, ಕೈಮುಗಿದೆ, ಅಡ್ಡಬಿದ್ದೆ ಬುದ್ಧಿ !, ಪಾದಕ್ಕೆ ಬಿದ್ದೆ ಬುದ್ಧೋರಾs !, ಶರಣ್ರೀಯಪ್ಪs" ಎಲ್ಲವೂ ನಮಸ್ಕಾರದ ಚಮತ್ಕಾರಕ ಮಾತುಗಳೇ !! "ದುರ್ಜನಂ ಪ್ರಥಮಂ ವಂದೆ । ಸಜ್ಜನಂ ತದನಂತರಂ।" ಎಂಬಂತೆ ದುರ್ಜನರಿಗೆ ಮಾತ್ರ ಮೊದಲು ನಮಸ್ಕರಿಸುವುದು ಸೂಕ್ತ !

ನಮಸ್ಕಾರದ ವರಸೆಗಳು, ಅಂತಸ್ತು, ಕಾಲ, ದೇಶ, ಸನ್ನಿವೇಶ, ಸಂದರ್ಭ ಗಳಿಗೆ ತಕ್ಕಂತೆ ಬದಲಾಯಿಸುತ್ತಿರುತ್ತವೆ. ಪರಿಚಿತರು ಕಂಡಕೂಡಲೇ "ಹಲೋ" ಎಂದು ಹಲ್ಲು ಬಿಟ್ಟು ಹೇಳಿದರೆ ಅದು ನಮಸ್ಕಾರದ ಷಾರ್ಟ್ ಫಾರಂ. ಆದರೆ ಕಾಲೇಜು ರಂಗವೇರಿದ ಕೂಡಲೇ ನಮ್ಮ ಹೈಕ್ಳುಗಳು ಅವರ ಜಿಗ್ರಿದೋಸ್ತ್‌ಗಳನ್ನು ಕಂಡ ಕೂಡಲೇ ಬ್ಯಾಡಗಿ ಒಣ ಮೆಣಸಿನಕಾಯಿ ತಿಂದವರಂತೆ "ಹಾಯ್ !" ಎನ್ನು ತ್ತಾರೆ. ಅವರೇನು ಕಡಿಮೆಯೇ ? "ಹಾಯ್ ! ಹಾಯ್ !!" ಎಂದು ಕೈ ಬೀಸಿ ಮುಂದೆ ಸಾಗುತ್ತಾರೆ.

ನನ್ನ ಗೆಳೆಯ ಉಸ್ಮಾನ್ ಬಾಗಿ "ಸಲಾಂ !" ಹೇಳಿದಾಗ ಆತನ ಉದ್ದನೆಯ ಟೋಪಿಯ ತುದಿಯ ಗೊಂಡೆ, ಪೆಂಡುಲಮ್‌ನಂತೆ ಅಲ್ಲಾಡುತ್ತದೆ. ಆದರೆ ನಮ್ಮ ಶೇರ್‌ಜೀ 'ರಾಮ್ ! ರಾಮ್ !!' ಹೇಳಿದರೆ ಚೀನದ ಪಗೋಡದಂತಿರುವ ಅವರ ತಲೆಯ ಮೇಲಿನ ಪೇಟ ಅಲ್ಲಾಡುವುದೇ ಇಲ್ಲ ! "ಹಸ್ತ ಲಾಘವ" ನನಗೆ ಹಿಡಿಸದು. ಏಕೆಂದರೆ "ಕೈ ಕೊಟ್ಟರೂ ಹೆಬ್ಬೆರಳು ಹೊರಗೆ ಇರುತ್ತೆ" ಅಲ್ವ ?

ಭಾನುವಾರ ಬಂದಿತೆಂದರೆ ನಮ್ಮ ಸಾಹೇಬರ ಸವಾರಿ ಸಕುಟುಂಬ ಸಮೇತ ವಾಗಿ ಸಂತೇಪೇಟೇಗೆ ಹಾಜರಾಗಿ ಬಿಡುತ್ತದೆ. ದಾರಿಯುದ್ದಕ್ಕೂ ಅವರಿಗೆ ಪರಿಚಿತ ರಿಂದ 'ನಮಸ್ಕಾರಗಳ ಸುರಿಮಳೆ' ಆದಂತೆ ಸುಪ್ರಸನ್ನರಾದ ಸಾಹೇಬರು ಬಿಮ್ಮನೆ ಬೀಗುತ್ತಾ ತಮ್ಮ ಅರ್ಧಾಂಗಿಯ ಕಡೆ ವಾರೆ ನೋಟ ಬೀರುತ್ತಿರುತ್ತಾರೆ.

ಅಂದು ಭಾನುವಾರ. ಎರಡೂ ಕೈಗಳಲ್ಲಿ ಎರಡೆರಡು ಸಾಮಾನು ತುಂಬಿದ ಕೈ ಚೀಲಗಳನ್ನು ಹಿಡಿದುಕೊಂಡು ಸಂತೇಪೇಟೆ ದಾರಿಯಲ್ಲಿ ಬರುತ್ತಾ ಇದ್ದೆ. ನಮ್ಮ ಆಫೀಸ್ ಜವಾನ ಬರಿಗೈಯಲ್ಲಿ ಎದುರಾದ. "ನಮಸ್ಕಾರ ಬುದ್ದೀ !"

ಅಂದ. "ನಿನಗೆ ಅದು ಇಲ್ಲಯ್ಯಾ !" ಅಂದೆ. ಗೇಲಿ ಮಾಡುತ್ತಾ. ಕೈ ಎತ್ತಲು ಸಾಧ್ಯವಿಲ್ಲದ್ದರಿಂದ ತಲೆಯನ್ನೇ ಬಾಗಿಸಿದೆ. ಸಹರಾ ಮರುಭೂಮಿಯಾಗಿದ್ದ ನನ್ನ ತಲೆಯ ಮೇಲಿನ ಜರಿಯ ಕರಿಯ ಟೋಪಿ ಜರ್ರನೆ ಜಾರಿ ಮಣ್ಣಲ್ಲಿ ಉರುಳುಸೇವೆ ಸಲ್ಲಿಸಿತು ! ಕೂಡಲೇ ಜವಾನ ಅದನ್ನೆತ್ತಿ ಧೂಳು ಝಾಡಿಸಿ, ನನಗೆ ಮತ್ತೆ "ಕರಿಯ ಕಿರೀಟಧಾರಣೆ" ಮಾಡಿದ. ಅದರ ಅಂಚಿನಲ್ಲಿ ಕುಸುರಿ ಮಾಡಿದ್ದ ಬೆಳ್ಳಿ ಬಣ್ಣದ ಜರಿ ಕಿತ್ತು ನೇತಾಡುತ್ತಿತ್ತು. ಅದನ್ನೇ ನೋಡುತ್ತಾ ಆತ ಮತ್ತೆ "ಸಾರೂs!" ಅಂದ.

"ಯಾವ ತರಕಾರಿ ಹಾಕಿದ್ರೂ !" ಎಂದು ಮತ್ತೆ ಗೇಲಿ ಮಾಡಿದೆ. "ಖೋಟಾ ನೋಟಿನಾಗೆ ಬೆಳ್ಳಿ ಎಳೆಯಂತ ದಾರ ಇರಾಕಿಲ್ಲ. ಸಾಚಾ ನೋಟಿನಾಗೆ ಇರ್ತಾದಂತ. ಹೌದ್ರಾ ! "ಅಂದ. ಅರೆ ! ಹೌದಯ್ಯಾ ! ಬೇಕಾದ್ರು ನೋಡಿಲ್ಲಿ" ಎಂದು ನಾನು ಕೂಡಲೇ ನನ್ನ ಎರಡೂ ಕೈಗಳಲ್ಲಿನ ಕೈ ಚೀಲಗಳನ್ನು ಅವನ ಕೈಗಳಿಗೆ ವರ್ಗಾಯಿಸಿದ. ಕೋಟಿನ ಜೇಬಿಗೆ ಕೈ ಹಾಕಿ ಪರ್ಸನ್ನು ಹೊರತೆಗೆದು ಅದರಿಂದ ಹತ್ತು ರೂಪಾಯಿಯ ಹೊಸ ನೋಟನ್ನು ಹೊರತೆಗೆದು ಪರ್ಸನ್ನು ಜೇಬಿಗೆ ಹಾಕಿ ಅನಂತರ ನೋಟನ್ನು ಬಿಸಿಲಿಗೆ ಹಿಡಿದು ಎಳೆಯನ್ನು ತೋರಿಸಿದೆ. ಆತ ಕೂಡಲೇ ನನ್ನ ಕೈ ಚೀಲಗಳನ್ನೂ ನನ್ನ ಕೈಗಳಿಗೆ ನೇತಾಡಿಸಿ, "ಬಾಯಿಗೆ ಎಟುಕುವಂತಿರುವ ಸಿಹಿ ದ್ರಾಕ್ಷಿ ಗೊಂಚಲಿಗೆ ನರಿ ಹಾರದೇ ಬಾಯಿ ಹಾಪುವಂತೆ" ನನ್ನ ಕೈಯಿಂದ ನೋಟನ್ನು ಮೆಲ್ಲಗೆ ಜಾರಿಸಿ ತೆಗೆದುಕೊಂಡ. "ತುಂಬಾ ಉಪ ಕಾರ ಆಯ್ತು ಬುದ್ಧೀ ! ಸಂಬಳ ಆದ ಕೂಡ್ಲೆ ಇದು ನಂದಲ್ಲ ಅಂತ ನಿಮ್ಗೆ ವಾಪಾಸ್ ಕೊಡ್ತೇನೆ. ಬರ್ತೇನೆ. ನಮಸ್ಕಾರ !" ಅಂತ ಹೇಳ್ತಾ ಜನಜಂಗುಳಿಯಲ್ಲಿ ಮಾಯವಾದ. ನಾನು ಬೆಪ್ಪಾಗಿ "ನ-ಮ-ಸಾ-ಕ್ಕರ" ಎಂದು ಬಡಬಡಿಸಿದೆ. ಆದರೆ ತಲೆ ಬಾಗಿಸಲಿಲ್ಲ. "ಏತ ತಲೆ ಬಾಗಿವರೆ—ಇಕ್ಕುಳ ಕೈಮುಗಿದರೆ ಆಗುವುದೇ ಹೀಗೆ" ಎಂಬ ಜ್ಞಾನೋದಯವಾಯ್ತು.

ಭಾರವಾದ ಕೈಚೀಲಗಳನ್ನು ಹೊತ್ತು, ಕಾಲು ಎಳೆದು ಹಾಕುತ್ತಾ ಮನೆಯನ್ನು ಪ್ರವೇಶಿಸಿದೆ. ಕೂಡಲೇ ಕುಶಾಲ ತೋಪುಗಳು ಹಾರಿದಂತೆ "ವಣಕ್ಕುಂ !, ರಾಂ ! ರಾಂ !!, ನಮಸ್ಕಾರ್ರೀs" ಎಂಬ ಮಾತುಗಳು ನನ್ನ ಕಿವಿಗೆ ಅಪ್ಪಳಿಸಿದವು. ಬಂದವರಾರೆಂದು ನೋಡಿದೆ. ಬಾಡಿಗೆ ಮನೆಯ ಬಟ್ಟೆ ಅಂಗಡಿ ಶೇರ್‌ಜೀ ಹಾಗೂ ಕಿರಾಣಿ ಅಂಗಡಿಗಳ ಮಾಲಿಕತ್ರಯರುಗಳು ಬಾಕಿ ವಸೂಲಿಗಾಗಿ ವಕ್ಕರಿ ಸಿದ್ದರು. ಭೂಮಿ ತೂಕದ ಕೈ ಚೀಲಗಳ ಸಮೇತ ಕೈ ಎತ್ತಿ ತಲೆ ಬಾಗಿಸದೆ ಉಸುರಿದೆ. "...ನ....ನ...ನಮಸ್ಕಾರ!!"



# ಗಜಲಕ್ಷ್ಮಮ್ಮನವರೂ ಮತ್ತು ಸುಂದ್ರಿಯೂ.....

—ಗಾಯತ್ರಿ

---

ಗಜಲಕ್ಷ್ಮಮ್ಮನವರದು ಸಾರ್ಥಕನಾಮು. ನೋಡಲು ಗಜದಂತೆ—ಅಂಗಾಂಗಗಳ ಅಳತೆ, ಮೈ ತೂಕ, ಮೈ ಬಣ್ಣ ಆದಿಯಾಗಿ. ಸಾಕ್ಷಾತ್ ಲಕ್ಷ್ಮೀ ದೇವಿಯೂ ಹೌದು ! ಅವರ ಅಗಾಧ ಮೈ ಮೇಲಿನ ಒಡವೆಗಳ Stock ತೆಗೆದರೆ ಅಥವಾ ಅವರ ತಿಜೋರಿಯಲ್ಲಿ ಹುದುಗಿರುವ ಕರೆನ್ಸಿ ನೋಟುಗಳ ತೂಕ ಮಾಡಿದರೆ !

ಗ. ಲ. ನವರಿಗೆ ಎಲ್ಲಾ ವಿಷಯಗಳಲ್ಲೂ ಬಹಳ ಆಸಕ್ತಿ. ಒಡವೆ, ಸೀರೆ, ಸಮಾಜ, ಶ್ರೀಲಂಕ, ರಾಮಾಯಣ, ಪಂಜಾಬು, ಸಿಂಗಪುರ್, ಪಿಕ್ಚರ್ರು, ಇಕೆಬಾನ, ಬೇಕರಿ classsಉ, ಮಾರ್ನಿಂಗು ವಾಕಿಂಗು, ರಿಡಕ್ಷನ್ ಸೇಲು, ಸೋನಿಯಾ ಗಾಂಧಿ, ಕ್ರಿಕೆಟ್ಟು, ಸೋಷಿಯಲ್ ಸರ್ವಿಸ್ಸು, etc., etc. ಪಾಪ ಒಂದನ್ನು ಬಿಟ್ಟು—ಅಡುಗೆ ಕೆಲಸವೆಂದರೆ—ಆಗದು. ಅವರ ಮೈಗೂ ಒಗ್ಗದು ! ಒಂದು ಸಣ್ಣ ಕೆಲಸ ಮಾಡಿದರೂ ಬುಸು ಬುಸು. ಸಮಾಜದ ಮಹಿಳಾಮಣಿಗಳ ಆಣಿಮುತ್ತಿನಂಥಾ ಸಲಹೆಯಂತೆ ಒಂದು ಹುಡುಗಿ—ಸುಂದರಿ—ಗೃಹ ಪ್ರವೇಶ ಮಾಡೇ ಬಿಟ್ಟಳು. ಗ. ಲ. ನವರ ಅಸಿಸ್ಟೆಂಟಾಗಿ !

ಸುಂದರಿಯ "Operation ತರಪೇತಿ" ಶುರುವಾಗೇ ಬಿಟ್ಟಿತು. ಉಟ್ಟ ಹರಕು ಬಟ್ಟೆಯಲ್ಲೇ ಬಂದಿದ್ದಳು ಸುಂದರಿ. ಟವಲ್ಲು, ಲಿರಿಲ್ ಸೋಪು, ಬ್ರುಷು, ಬಿನಾಕಾ—ಸಾರಿ !—ಸಿಬಾಕಾ ಪೇಸ್ಟು ಕೊಟ್ಟು ಬಿಳೀ ಟೈಲ್ಸ್‌ನ Attached bathಗೆ (ಹೊಂದಿಕೊಂಡಿರುವ ಬಚ್ಚಲು) ಕಳಿಸಿದರು—ಗ. ಲ. ನವರು. ಒಂದು ಗೋಡೆ ಹಂಡೆಯ (ಗೀಸರ್) ಮರಳೋ ನೀರಲ್ಲಿ ಶೃಂಗಾರ ಸಾಧನ [ಚೊಕ್ಕಟ ಸಾಧನ]ಗಳೊಡನೆ ಜಳಕವಾಡಿ, ಕೆಂಪಾಗಿ, Bombay Dyeing ಟವಲ್ ಸುತ್ತಿಕೊಂಡು ಈಚೆ ಬಂದ ಸುಂದ್ರಿ, "ಎ" ಸಿನಿಮಾದ ಮಲೆಯಾಳಿ ಹೀರೋಯಿನ್‌ಗಳನ್ನೂ ಮೀರಿಸುವಂತಿದ್ದಳು.

ಒಂದೊಂದಾಗಿ ಅಡುಗೆ ಮನೆಯ ಕಾರ್ಯಗಳು ಸುಂದ್ರಿಯ ಸುಪರ್ದಿಗೆ ಬಂದುವು. ಗ. ಲ.ನವರು ಯಾರನ್ನೂ ಸುಲಭವಾಗಿ ನಂಬುವ ಆಸಾಮಿಯಲ್ಲ.

ಬಹಳ ಪ್ರೀತಿಯಿಂದ ಸುಂದ್ರಿಗೆ ಕೆಲವು ಉಚಿತ ಸಲಹೆಗಳನ್ನು ಕೊಟ್ಟರು. ಹಾಲು, ಕೆನೆ ತಿಂದರೆ ವೈ ಬರುತ್ತೆ, ಸಕ್ಕರೆ ತಿಂದರೆ ಸಕ್ಕರೆ ಖಾಯಿಲೆ ಬರುತ್ತೆ, ಸಿಹಿ ತಿಂಡಿ ತಿಂದರೆ ವಾಂತಿಯಾಗುತ್ತೆ, Coffee, tea ಕುಡಿದರೆ ಕಪ್ಪಗಾಗ್ತೀಯ, ಕರಿದ ಪದಾರ್ಥ ತಿಂದರೆ ಮೊಡವೆ ಬರುತ್ತೆ, ಮೊಸರು ತಿಂದರೆ ಶೀತವಾಗುತ್ತೆ, ಮುಂತಾ ದುವುಗಳನ್ನು ಹೇಳುತ್ತಾ ಸುಂದ್ರಿಯನ್ನು Strict dietನಲ್ಲಿ ಇಟ್ಟಿದ್ದರು. ಅರ್ಥ ವಾಗಿ ಹೋಯಿತು ಸುಂದ್ರಿಗೆ, ಗ.ಲ.ನವರ ಆಕಾರದ ಗುಟ್ಟು! ಇವೆಲ್ಲಾ ಪದಾರ್ಥಗಳನ್ನು ಸ್ವತಃ ಸುಂದ್ರಿಯೇ ಭಾರಿ ಪ್ರಮಾಣದಲ್ಲಿ ಗ. ಲ.ನವರ ಮುಖಕ್ಕೆ ಹಿಡಿದಾಗ, ಸುಂದ್ರಿಯ ಮುಖ ನೋಡದೆಯೇ ತಟ್ಟೆಯನ್ನು ನಯವಾಗಿ ಕಳಚಿ ಕೊಂಡು ನಿಮಿಷದೊಳಗೆ ಖಾಲಿ ತಟ್ಟೆಯನ್ನು ಬಚ್ಚಲಿಗೆ ಕಳುಹಿಸುತ್ತಿದ್ದರು.

ಸುಂದ್ರಿಯ ಸೇವೆಯಿಂದ ಗ. ಲ. ನವರ ಅಗಲ ತೂಕಗಳು ಈಗಿನ ಬೆಲೆ' ಗಳಂತೆ ಗಗನಕ್ಕೇರಿತು. ಗ. ಲ, ನವರ ತೂಕ ಹೆಚ್ಚಿದಂತೆ ಸುಂದ್ರಿಯ ಮೇಲಿನ ಅವಲಂಬನೆಯೂ ಹೆಚ್ಚಾಯಿತು. ಸುಂದ್ರಿಯೂ ಚಾಲಾಕಿ, ಗ. ಲ.ನವರನ್ನು ಕಂಡರೆ ಪ್ರೀತಿಯೋ ಪ್ರೀತಿ. ಆದರೆ ಅವರ Free adviceಉ ಗಳನ್ನು ಕಿವಿಯ ಮೇಲೇ ಹಾಕಿಕೊಳ್ಳಲಿಲ್ಲ. Balanced diet ನಿಂದಾಗಿ ಅವಳ ಬುದ್ಧಿ ಗ. ಲ. ನವರಿಗಿಂತ ಚುರುಕಾಯಿತು.

ಮೊದಲು ಗ. ಲ.ನವರು "ಸುಂದ್ರೀ, ತೆಂಗಿನಕಾಯಿ ತುರಿಯೇ" ಎಂದು ಹೇಳಿದರೆ, "ಕಾಯಿ ಒಡೀಬೇಕಾ ಅಮ್ಮಾವ್ರೇ ?" ಎನ್ನುತ್ತಿದ್ದಳು.

ಈಗ ಗ. ಲ.ನವರು ''ಸುಂದ್ರೀ, ಕಾಯಿ ಒಡ್ಕೊಂಡು ತುರಿಯೇ' ಎಂದರೆ. "ಕಾಯಿ ಒಡೀದೆ, ತುರಿಯೊಕ್ಕಾಗುತ್ತಾ ?" ಎಂದು ಕಿಲ ಕಿಲಸಿ ಅಮ್ಮನವರ ಮುಖ Shape ಮಾಡುತ್ತಿದ್ದಳು.

ಎರಡು ವರ್ಷಗಳ ನಂತರ.........

ಚೈನೀಸ್ ಸೀರೆ ಉಟ್ಟ ಸುಂದ್ರಮ್ಮನವರು ಅಡುಗೆ ಮನೆಯ ಸರ್ವಾಧಿ ಕಾರಿಣಿ. ಅವಳ ರುಚಿಗೆ ತಕ್ಕಂತೆ ಮೆನು. ಗಜಲಕ್ಷ್ಮಿ ಉಸಿರೆತ್ತುವಂತಿಲ್ಲ. ಅದು ತಿನ್ನ ಬೇಡಿ, ಇದು ತಿನ್ನಬೇಡಿ ತೂಕ ಇಳಿಸಬೇಕು, Bed pleasure, ಡೈಯಾಬಿಟ್ಸು, ಸುಗರ್-ಕಂಪ್ಲೀಟ್, ಮುಂತಾದ ಕಾರಣಗಳನ್ನು ಕೇಳಿ ಕೇಳಿ, ಗಜಲಕ್ಷಮ್ಮ ಈಗ ಬರೀ ಸಣಕಲು ಲಕ್ಷ್ಮಿಯಾಗಿ, ಸುಂದ್ರಿ ಗಜಸುಂದ್ರಿಯಾಗಿದ್ದಳು. ಈಗ ಸುಂದ್ರಮ್ಮ ನವರಿಗೆ ಬುಸುಬುಸು–ಕೆಲಸಮಾಡಿದರೆ. ತನ್ನ ಸಹಾಯಕ್ಕೆ ಒಬ್ಬ ಅಸ್ಸೆಂಟನ್ನ

ನೇಮಿಸಿಕೊಂಡಿದ್ದಳು. ಸುಂದ್ರಮ್ಮನವರು ತಮ್ಮ ಅಸ್ಟೆಂಟನ್ನ "Operation ವರಪುರಿ" ಪ್ರೋಗ್ರಾಮಿನಲ್ಲಿ ಇನ್ನೊಂದು Itemಉ ಸೇರಿಸಿದ್ದರು. ರಾತ್ರಿ ಹೊತ್ತು ತಾವು ನಿದ್ರೆ ಮಾಡುವ ತನಕ ತಮ್ಮ ಕಾಲನ್ನು ಮೃದುವಾಗಿ ಒತ್ತಬೇಕಾಗಿತ್ತು ಆ ಹುಡುಗಿ.

ಹಳೇ ಹವಾಯಿಗಳನ್ನು ಕಾಲಲ್ಲಿ ಮೆಟ್ಟುತ್ತಿರಲಿಲ್ಲ ಸುಂದ್ರಮ್ಮ. ಹೊಸ Bataನೇ ಬೇಕು. ಗಜಲಕ್ಷ್ಮಿಯ ಸ್ಟೈಲಿಕ್ಸ್ ಸೀರೆಗಳೆಂದರೆ ಸುಂದ್ರಮ್ಮನವರಿಗೆ ತಾತ್ಸಾರ. Chineseಉ, ಗಾರ್ಡನ್ನೇ ಬೇಕು. Afghan snow, ಹಿಮಾಲಯ Powderಗಳನ್ನು ತನ್ನ ಅಸ್ಟೆಂಟ್‌ಗೆ ವರ್ಗಾಯಿಸಿ, ತನಗೆ Fair & Lovely, Lakme ಪೌಡರೇ ಇರಿಸಿಕೊಂಡಿದ್ದಳು. ಸೀಗೆಕಾಯಿ ತಲೆಗೆ ಅಲರ್ಜಿ, ಮೊಟ್ಟೆ Shampooನೇ ಬೇಕು. ಮಕ್ಕಳ Uniform ಇಸ್ತ್ರಿ ಮಾಡುವ ಮೊದಲು ತಮ್ಮ ಬಟ್ಟೆ ಇಸ್ತ್ರಿ ಆಗಬೇಕು. ಚಿತ್ರಹಾರ್ ನೋಡುವಾಗ ಅವರನ್ನು ಯಾರೂ ಡಿಸ್ಟರ್ಬ್ ಮಾಡಬಾರದು. ಆದರೆ ಸಣ್ಣ ಹೆಡೇಕ್ ಬಂದರೆ ಯಾರೂ T. V. ಹಾಕಬಾರದು. ಪತ್ರಿಕೆಗಳನ್ನು ಗಜಲಕ್ಷ್ಮಿಗಿಂತ ಮುಂಚೆ ಅವರೇ ನೋಡುವುದು. ಗಜಲಕ್ಷ್ಮಿಯ ತಲೆಯಲ್ಲಿ ಹೂ ತಪ್ಪಿದರೂ ಇವರ ತಲೆಯಲ್ಲಿ Red rose ತಪ್ಪುವಂತಿಲ್ಲ. Gas ಆಗಿ ಹೋದರೆ, ಕರೆಂಟ್ ಹೋದರೆ ಅಡುಗೆ ಕೆಲಸ ಅಲ್ಲಿಗೇ Stop. Fresh ಡಿಕಾಕ್ಷನ್ ಕಾಫೀನೇ ಆಗಬೇಕು.

ಈಗ ಗಜಲಕ್ಷ್ಮಿ ಸುಂದ್ರಮ್ಮನವರ "Operation—ಡಿಸ್‌ಮಿಸ್"ಗೆ ಪಿತೂರಿ ಹೂಡಿ ಸಮಾಜದ ಮಹಿಳಾಮಣಿಗಳೊಡನೆ Top secret ಮೀಟಿಂಗ್‌ಗಳನ್ನು ನಡೆಸುತ್ತಿದ್ದಾಳೆ.



---

ರಸ್ತೆಗಳನ್ನು ONE WAY ಮಾಡುವುದರಿಂದ ಬಲು ಪ್ರಯೋಜನ. ಲಾರಿಗಳು, ಯಾವ ಕಡೆಯಿಂದ ಬಂದು ಗುಮ್ಮುತ್ತವೆ ಎಂಬುದು ತಿಳಿದಿರುತ್ತೆ.

---



ಏನ್ ರಾಯರೇ ಹೊರಟಿರಿ ?
ಜವಾನನ ಕೈಲಿ ಕಾಗದ ಕೊಟ್ಟಿದ್ದೆ ಟಪಾಲಿಗೆ ಹಾಕಲು—
—ಸರಿಯಾಗಿ ಹಾಕುತ್ತಾನೋ ಇಲ್ಲವೋ ನೋಡುಕ್ಕೆ ಹೋಗುತ್ತಿದ್ದೇನೆ.



ಐಸ್‌ಕ್ರೀಂ ಮೆಲ್ಲುತ ಕಾನ್ವೆಂಟ್ ಶೋರಿ ಕೊಶ್ಚನಿಸಿದಳು ಮಮ್ಮಿ
ಚಂದಿರ ಓಡುವನೇತಕೆ ಹೀಗೆ ? ಕಾರಣವೇನು ? Tell me !
ಸ್ಕೂಲಿನ ಮೇಡಂ ಮೋಡಗಳಾಗಿ ಚಂದ್ರನ ಕಾಡುವರೆ ?
ಹೋಂ ವರ್ಕ್ ಮಾಡದ ತಪ್ಪಿಗೆ ಓಡುವ ಶಿಕ್ಷೆಯು ನೀಡುವರೆ ?
ಕಣ್ಣಾ ಮುಚ್ಚೆ ಇರಬಹುದೆ ? ಯಾರೊಡನಿವನಾಟ ?
ಸೊಂಟದ ಕೊಬ್ಬನು ಕರಗಿಸಲಿಕ್ಕೊ ಚಂದ್ರನ ಈ ಓಟ ?

o

ಇಂದುಮುಖಿಯರ ಹಿಂದೆ ಅಲೆಯುವ ನಿರುದ್ಯೋಗಿ ಕಿಟ್ಟಿ
ಚಂದ್ರನ ಬಗ್ಗೆ ಕೇಳಿದಾಕ್ಷಣ ಈ ಕಾರಣ ಕೊಟ್ಟ.
ಕಾಲೇಜಿಂದ ಟಾಕೀಸಿನ ಕಡೆ ಚಂದ್ರ ಓಡುತಿರುವ
ಅಂದ ಮೇಲೆ ಆವ ಹುಡುಗಿಯರನ್ನು ಫಾಲೋ ಮಾಡುತಿರ

ಅಥವಾ ಇಲ್ಲಿನ ಹಾಗೇ ಅಲ್ಲೂ ಮುಷ್ಕರ ಬಂದ್ ಇರಬಹುದು
ಲಾಠಿ ಚಾರ್ಜು, ಗೋಲೀಬಾರು, ಪೋಲೀಸ್ ಬಂದಿರಬಹುದು

ಬರೆದೂ ಬರೆದೂ ಚಂದ್ರನ ಹಾಗೆ ಬೆಸ್ತು ಬಾಗಿ ಹೋದ
ಬಡ ಗುಮಾಸ್ತನಿಗೆ ಚರಂಡಿಯಲ್ಲಿ ಚಂದಿರ ಕಾಣಿಸಿದ
ಅರರೆ ! ಇವನೂ ಓಡುವನಲ್ಲ ಥೇಟ್ ನನ್ನ ಹಾಗೆ
ಎಷ್ಟು ಗಂಟೆಗೆ ಇವನಾಫೀಸು ? ಲೇಟಾಯ್ತೋ ಹೇಗೆ ?
ಯಾವ ಬಸ್ಸಿಗೆ ಜೋತು ಬೀಳಲು ಓಡುತಿರುವನೀತ ?
ಕೀಲು ಮುರಿಯಲು ಬೆನ್ನಟ್ಟಿಹನೆ ಸಾಲವ ಕೊಟ್ಟಾತ.

ಓಡುವ ಚಂದ್ರನ ನೋಡಿದ ಗೃಹಿಣಿ ಯೋಚಿಸಿದಳು ಹೀಗೆ
ಸೀಮೆಎಣ್ಣೆ ಸಕ್ಕರೆ ಬಂದಿದೆ ರೇಶನ್ ಅಂಗಡಿಗೆ
ಇರಬಹುದೆಲ್ಲೊ ಇಳಿಸಿದ ದರದಲಿ ಬಟ್ಟೆಯ ಮಾರಾಟ
ಬಹುಶಃ ಮನೆಯಲಿ ನೆಂಟರ ಹಾವಳಿ ಅತ್ತೆಯ ಶನಿಕಾಟ.

ಪ್ರತಿಯೊಬ್ಬರಿಗೂ ಅವರದೆ ಚಿಂತೆ ಯಾರನು ನಂಬುವುದು
ಚಂದಿರನನ್ನೆ ಕೇಳಿಬಿಡೋಣ ಓಡುವುದೇಕೆಂದು
ಚಂದಿರ ಥಟ್ಟನೆ ಉತ್ತರ ಕೊಟ್ಟ. ಇಲ್ಲಿದೆ ನೋಡಿರಿ ಕಾರಣ
ಕಿವಿಗಳ ಮುಚ್ಚಿ ಓಡುತಿರುವೆ ನಾ, ನಡೆದಿದೆ ಕವಿ ಸಮ್ಮೇಳನ.

17

# ಚಿನ್ ಪಾಪ್ ಮತ್ತು ತಮ್ಮುಡು

—ಕುಮಾರ್

---

ಇದು ಬಲ್ಗೇರಿಯಾದ ಜಾನಪದ ಕಥೆ ಅಲ್ಲ. ನಾಲ್ಕು ದಶಕಗಳ ಹಿಂದೆ ಮಲ್ಲೇಶ್ವರದಲ್ಲಿ ನಡೆದದ್ದು.

ನಮ್ಮ ಪಕ್ಕದ ಮನೆಗೆ ಹೊಸದಾಗಿ ಯಾರೋ ಬಾಡಿಗೆಗೆ ಬಂದಿದ್ದರು. "ತೆಲುಗಿನವರಂತೆ ಕಣೇ !" ಅಂತ ನಮ್ಮಮ್ಮ ನಮ್ಮ ಚಿಕ್ಕಮ್ಮನ ಹತ್ತಿರ ಹೇಳುತ್ತಿದ್ದುದನ್ನು ನನ್ನ ತಮ್ಮ ಬಚ್ಚು ಕೇಳಿಸಿಕೊಂಡಿದ್ದ. ಆಗ ಬೇಸಿಗೆಯ ರಜೆ. ಬೆಳಗಾಗೆದ್ದಾಗಿನಿಂದ ತಿಂಡಿಗೆ ಕರೆಯುವವರೆಗೂ ಆಟ. ತಿಂಡಿ ಆದ ಮೇಲೆ ಪುನಃ ಆಟ. ಬಲವಂತ ಮಾಡಿ ಊಟ ತಿಂಡಿ ತಿನ್ನಿಸದಿದ್ದರೆ, ದಿನವೆಲ್ಲಾ ಬರೀ ಆಟದಲ್ಲೇ ಕಳೆದು ಬಿಡುತ್ತಿದ್ದೆವೋ ಏನೋ !

ಅಂದು ಬೆಳಗಿನ ಆಟಕ್ಕೆ ಪಕ್ಕದ ಮನೆಯಲ್ಲಿ ಒಡನಾಡಿಗಳು ಸಿಗುವ ಬಗೆ ಪತ್ತೆ ಹಚ್ಚಲು ನಾನು, ಬಚ್ಚು ಹೊರಟೆವು. ಗೇಟ್ ಹಾಕಿತ್ತು. ಗೇಟಿನ ಒಳಗೆ ಒಂದು ಹುಡುಗಿ. ಆರೇಳು ವರ್ಷ ಇರಬಹುದು. ನಾನೇ ಸಂಭಾಷಣೆ ಶುರು ಮಾಡಿದೆ.

"ನಿನ್ನ ಹೆಸರೇನು ?"

"ನೇನು ಚಿನ್ನಪಾಪ್, ವಾರು ತಮ್ಮುಡು"

ತಮ್ಮುಡು ಅಕ್ಕನ ಲಂಗದ ಹಿಂದೆ ಅವಿತುಕೊಂಡು, ತಲೆ ಮಾತ್ರ ಹಣಕಿ, ಬೆರಳು ಚೀಪುತ್ತಾ ನೋಡುತ್ತಿತ್ತು.

"ಆಟ ಆಡುಕ್ಕೆ ಬಂದಿದೀವಿ" ನಮ್ಮ ಆಗಮನದ ಕಾರಣ ತಿಳಿಸಿದೆ.

ಚಿನ್ನಪಾಪ್ ಗೇಟ್ ತೆಗೆದಳು.. "ರಾಂಡ"

ಬಚ್ಚು 'ರನ್ನಿಂಗ್ ರೇಸ್' ಅಂತ ಕೂಗುತ್ತಾ ಅವರ ಮನೆ ಬಾಗಿಲ ಕಡೆ ಓಡಲು ಪ್ರಾರಂಭಿಸಿದ, ಸರಿ. ನಾವೆಲ್ಲರೂ ದೌಡಾಯಿಸಲು ಶುರು. ತಮ್ಮುಡು ಸಹಾ ನಮ್ಮ ಹಿಂದೆ ಓಡಿ ಬರುತ್ತಿತ್ತು. ಚಿನ್ನ ಪಾಪ್ ಬಾಗಿಲನ್ನು ಮೊದಲು

ಪುಟ್ಟಿ "ನೇನು ಫಸ್ಟ್!" ಅಂತ ಕೂಗಿದಳು ಬಜ್ಜು ಸೆಕೆಂಡ್. ನಾನು ಬಾಗಿಲು ತಲುಪುವಷ್ಟರಲ್ಲಿ ಹಿಂದೆ "ಹೋ" ಎಂದು ಸದ್ದಾಯಿತು. ತಿರುಗಿ ನೋಡಿದರೆ ತಮ್ಮುಡು ಎಡವಿ ಬಿದ್ದಿದೆ. ಮಂಡಿ ತರಚಿ ರಕ್ತ ಸುರಿಯುತ್ತಿದೆ. ಎತ್ತರಿಸಿದ ದನಿಯಿಂದ ತಮ್ಮುಡು ಬೊಬ್ಬೆ ಇಡಲು ಪ್ರಾರಂಭಿಸಿತ್ತು.

ಮಕ್ಕಳ ತಾಯಿ ಒಳಗಿನಿಂದ ಓಡಿ ಬಂದು, ತಮ್ಮುಡುವನ್ನು ಎತ್ತಿಕೊಂಡು ಸಾತ್ವೈಸುತ್ತಾ, "ದಾ ಚಿನ್ನ. ದಾಪು" ಎಂದು ಹೇಳಿ, ಚಿನ್ನ ಪಾಪಳ ಕಡೆ ತಮ್ಮ ಭೀಷಣ ರೌದ್ರತೆಯನ್ನು ಹರಿಯಬಿಟ್ಟರು.

"ಏಮಿ ಚೇಸ್ತೆ, ಯವರೇ ಈ ಕಿರಾತ ಬಿಡ್ಡ ? ಲೋಪಟಕಿ ರಾವೇ" ಎಂದು ಹೇಳುತ್ತಾ, ಒಳಕ್ಕೆ ಹೋದರು. ಚಿನ್ನಪಾಪ್, ಹೊಸ ಸ್ನೇಹಿತರಿಗೆ ವಿದಾಯ ಕೂಡ ಹೇಳದೇ ತಾಯಿಯ ಹಿಂದೆ ಒಳಕ್ಕೆ ಓಡಿದಳು.

ಅಂದಿನಿಂದ ಪ್ರತಿ ದಿನ ನಾವು ಅವರ ಮನೆಯಲ್ಲಿ, ಅಥವಾ ಅವರು ನಮ್ಮ ಮನೆಯಲ್ಲಿ. ಅವರ ನಿಜವಾದ ಹೆಸರು ನಮಗೆ ತಿಳಿಯದು. ನಮ್ಮ ಮಟ್ಟಿಗೆ ಅವರು ಚಿನ್ನಪಾಪ್ ಮತ್ತು ತಮ್ಮುಡು.

ಚಿನ್ನ ಪಾಪ್ ಕನ್ನಡ ಕಲಿತಳು. ಅವಳ ಕನ್ನಡ ಬಹು ಸರಳ. ಅದರಲ್ಲಿ ಸಂಬೋಧನೆಗೆ ಲಿಂಗ ಭೇದವಿಲ್ಲ. ಒಂದು ಮಧ್ಯಾಹ್ನ ಕಾಲಿಂಗ್ ಬೆಲ್ ಸದ್ದಾಯಿತು. ನಾನು ವರಾಂಡಕ್ಕೆ ಓಡುವಷ್ಟರಲ್ಲಾಗಲೇ ನಮ್ಮ ತಂದೆ ಅಲ್ಲಿದ್ದರು. ಚಿನ್ನ ಪಾಪ್ ಅವರನ್ನುದ್ದೇಶಿಸಿ,

"ಲೇ! ಬಾಗಿಲು ತೆಗೆಯೋ ಕಣೇ !" ಅಂತ ವಿನಂತಿಸಿಕೊಳ್ಳುತ್ತಿದ್ದಳು.

ಸುಧಾ ಮತ್ತು ರಮಣ್ ನಮ್ಮ ಹಳೆಯ ಸಂಗಾತಿಗಳು. ಅವರೂ ಸಹಾ ಅಕ್ಕ-ತಮ್ಮ ಜೋಡಿ. ಮನೆ ಮಾತು ತೆಲುಗಾದರೂ, ಆಟಪಾಟಗಳೆಲ್ಲಾ ಕನ್ನಡದಲ್ಲೇ. ಚಿನ್‌ಪಾಪ್ ಮತ್ತು ತಮ್ಮುಡು, ನಮ್ಮ ಕಾಗೆ ಬಳಗ ಸೇರಿದ ಮೇಲೆ ನಾವಾಡುತ್ತಿದ್ದ ಕುಂಟಾಟಕ್ಕೆ ಒಂದು ಹೊಸ ಕಳೆ ಬಂದಿತ್ತೆಂದು ಹೇಳಬಹುದು. ಸುಧಾ ಕುಂಟಾಟದಲ್ಲಿ ಎತ್ತಿದ ಕೈ. (ಎತ್ತಿದ ಕಾಲ್ ಎಂದು ಹೇಳಬೇಕೇನೋ !) ಅವಳು ಕುಂಟುತ್ತಾ ನಮ್ಮನ್ನು ಹಿಡಿಯಲು ಬಂದರೆ. ಆಟದ ಅಂಗಣ ಎಷ್ಟು ದೊಡ್ಡದಾಗಿದ್ದರೂ ತಪ್ಪಿಸಿಕೊಳ್ಳುವುದು ದುಸ್ಸಾಧ್ಯವಾಗುತ್ತಿತ್ತು. ಅಂದಿನ ಕುಂಟಾಟದ ಸಂಸ್ಕೃತಿ

ಯಲ್ಲಿ ಕುಂಟುವ ನಿಪುಣತೆಯನ್ನು ಗುರುತಿಸುವುದು ಬಹು ಸುಲಭದ ಕೆಲಸ. ಕುಂಟಾಟಗಾರ ಹೆಚ್ಚು ಅನುಭವಿಯಾದಷ್ಟು. ಅವನ ಎತ್ತಿದ ಪಾದ ನೆಲದಿಂದ ಅಷ್ಟು ಕಡಿಮೆ ಅಂತರದಲ್ಲಿರುತ್ತಿತ್ತು. ಒಮ್ಮೆ ಸುಧಾ ಎಡವಿ, ಅವಳ ಕಾಲಿನ ಹೆಬ್ಬೆರಳಿಗೆ ಗಾಯವಾಗಿತ್ತು. ಅಂತಹ ಸಣ್ಣ ಸಂಗತಿಗಳು, ಅವಳ ಆಟದ ನಿಷ್ಠೆಗೆ ಎಂದೂ ಅಡ್ಡಿ ಬಂದಿರಲಿಲ್ಲ. ಕ್ಲಾಪ್ಸ್ ಹಾಕಿದಾಗ ಆವಳೇ ಕೊನೆ. ಅಂದರೆ ನಾವೆಲ್ಲ ಓಡಬೇಕು ಅವಳು ಕುಂಟುತ್ತಾ ನಮ್ಮನ್ನು ಹಿಡಿಯಬೇಕು.

"ತಡೀರಿ, ಒಂದ್ನಿಮಿಷ ಬರ್‍ತೀನಿ" ಅಂತ ಹೇಳಿ ಸುಧಾ ಒಳಕ್ಕೆ ಓಡಿದಳು. ಕೆಲವು ನಿಮಿಷಗಳಲ್ಲಿ ಸುಧಾಳ ಪುನರಾಗಮನ. ಒಂದು ಕಾಲಿಗೆ ಒಂದು ದೊಡ್ಡ ಕಪ್ಪು ಬಣ್ಣದ ಬೂಡ್ಸು.ಗಾಯದ ಬೆರಳಿಗೆ ಒಳ್ಳೆಯ ರಕ್ಷೆ. ಬೂಡ್ಸಿನ ಕಾಲಿನಲ್ಲಿ ಸುಧಾ ಧಬ್ ಧಬ್ ಎಂದು ಕುಂಟುತ್ತಾ ನನ್ನ ಕಡೆಗೆ ಧಾವಿಸಿ ಬಂದಳು. ನನ್ನ ಎದೆ ಅವಳ ಕುಂಟು ವಿಕೆಗೆ ಸರಿಯಾಗಿ ಧಬ್, ಧಬ್ ಎಂದು ತಾಳ ಹಾಕುತ್ತಿತ್ತು. ಜೊತೆಗೆ ಒಂದು ಬಗೆಯ ನಿರಾಶಾಭಾವ ಎಷ್ಟು ಓಡಿದರೂ ಅವಳ ಕೈಯಿಂದ ತಪ್ಪಿಸಿ ಕೊಳ್ಳುವಂತಿರಲಿಲ್ಲ. ಸುಧಾ ಬಂದೇ ಬಂದಳು. ಧಬ್, ಧಬ್, ಧಬ್ ಇನ್ನೇನು ಕೈಯೆತ್ತಿ ನನ್ನ ಬೆನ್ನಿಗೆ ಹೊಡೆಯಬೇಕು. "ದೇವರೇ, ಕಾಪಾಡಪ್ಪ" ಅಂತ ನನ್ನ ಮನಸ್ಸಿನಲ್ಲಿಯೇ ಮೊರೆಯಿಟ್ಟೆ. ನನ್ನ ಪ್ರಾರ್ಥನೆ ದೇವರಿಗೆ ಕೇಳಿಸಿತೆಂದು ಕಾಣು ತ್ತದೆ. ಅಶರೀರವಾಣಿಯೊಂದು ಆಗಸದಿಂದ ಮೊಳಗಿತು.

"ಸಿಗ್ಗು ಲೇದು ! ಚಂಪೇಸ್ತಾನು, ಬೂಡ್ಸು ತೀಸ್ಕೊನ್ ರಾವೇ!"

ನಾವೆಲ್ಲಾ ಆಟ ನಿಲ್ಲಿಸಿ ಗಾಬರಿಯಿಂದ ತಲೆ ಎತ್ತಿ ನೋಡಿದವು. ಮನೆಯ ಮಹಡಿಯಲ್ಲಿ ಸುಧಾಳ ತಂದೆ, ಒಂದು ಕೈಯಲ್ಲಿ ಒಂಟಿ ಬೂಡ್ಸನ್ನು ಹಿಡಿದು ನಿಂತಿದ್ದಾರೆ. ಮುಖ ಕೆಂಡವಾಗಿದೆ ಸುಧಾ ಮರು ಮಾತಿಲ್ಲದೆ ಒಳಕ್ಕೆ ನಡೆದಳು ಅವಳಿಗಾದ ತೇಜೋವಧೆಯನ್ನು ಕಂಡು ನಮಗೆಲ್ಲಾ ಖುಷಿಯೋ ಖುಷಿ.

* * * *

ನಮ್ಮೆಲ್ಲರ ಒಡನಾಟ ಹೈಸ್ಕೂಲ್ ಮುಗಿಯುವವರೆಗೂ ಅವ್ಯಾಹತವಾಗಿ ಸಾಗಿತು. ಎಸ್ಸೆಸ್ಸೆಲ್ಸಿ ಪಾಸಾದ ಮೇಲೆ ತಮ್ಮುಗೆ ಒಂದು ಹೊಸಾ ಸೈಕಲ್ ಸಿಕ್ಕಿತು. ಮಲ್ಲೇಶ್ವರದಿಂದ ಕಂಟೋನ್‌ಮೆಂಟಿನವರೆಗೂ ಸೈಕಲ್‌ನಲ್ಲಿ ಹೋಗಿ ಬರುವುದೇ ಒಂದು ದೊಡ್ಡ ಸಾಹಸ. ಅಲ್ಲಿನ B. R V. ಚಿತ್ರಮಂದಿರದಲ್ಲಿ ಮಾರ್ನಿಂಗ್ ಷೋ ನೋಡಿ ಬರುವುದಂತೂ ಅತಿರಥ, ಮಹಾರಥಂ ಕೆಲಸ.

ಒಮ್ಮೆ ನಾನು ಮತ್ತು ನನ್ನ ತಮ್ಮ ಮನೆಯಲ್ಲಿದ್ದಾಗ ತಮ್ಮು ಬಂದ.

"B. R. V. ಥೇಟರಿನಲ್ಲಿ ಮಾರ್ನಿಂಗ್ ಷೋ ನೋಡಿ ಬಂದೆ"

ನಮಗೆ ಅಸೂಯೆ ಹಾಗೂ ಹೊಟ್ಟೆ ಉರಿ. ಹೊರಗೆ ತೋರಿಸಲಿಲ್ಲ.

"ಯಾವ ಪಿಕ್ಚರ್ ನಡೀತಿತ್ತು ?" ನನ್ನ ತಮ್ಮ ಕೇಳಿದ.

"ವಾರ್ನರ್ ಬ್ರಾಸ್ (Warner Bros.)" ತಮ್ಮುವಿನ ಅಮಾಯಕ ಉತ್ತರ. ಸರಿ, ಈ ಪ್ರಾಣಿ ಚಿತ್ರಮಂದಿರದ ಹೊರಗಿನ ಪೋಸ್ಟರನ್ನ ಭಾಗಶಃ ಓದಿ ಬಂದು ಜಂಭ ಕೊಚ್ಚುತ್ತಿದೆ ಎಂದು ನಮಗೆ ತಕ್ಷಣ ಗೊತ್ತಾಯಿತು.

"ವಾರ್ನರ್‌ನ ಅಭಿನಯ ಹೇಗಿತ್ತು ?" ನಾನು ಕೇಳಿದೆ.

"ಬಹಳ ಮಜವಾಗಿತ್ತು. ನೀವಿಬ್ರೂ ನೋಡ್ಲೇ ಬೇಕು" ಅಂತ ಹೇಳಿ ತಮ್ಮು ಕಂಬಿ ಕಿತ್ತ. ನಮ್ಮಿಬ್ಬರ ಹೊಟ್ಟೆ ಉರಿ ತಣ್ಣಗಾಗಿತ್ತು.

*     *     *     *

ಸುಧಾ ಈಗ ಖ್ಯಾತ ಡಾಕ್ಟರ್. ಅಮೆರಿಕೆಯಲ್ಲಿದ್ದಾಳೆ. ಮೊನ್ನೆ ಊರಿಗೆ ಬಂದಿದ್ದಳು. ನಾನು ಭೇಟಿ ಮಾಡಿದ್ದೆ. ಇಪ್ಪತ್ತೈದು ವರುಷಗಳ ನಂತರದ ಸಮಾಗಮ. "ಯಾಕೋ, ತಲೆ ಎಲ್ಲಾ ಬೋಡಾಗಿದೆ ?" ಅಂತ ಆತ್ಮೀಯತೆಯಿಂದ ಸ್ವಾಗತಿಸಿದಳು. ಆ ಕ್ಷಣವೇ ಕಾಲದ ಅಂತರವೆಲ್ಲಾ ಮಾಯವಾಯಿತು. ಘಂಟೆಗಟ್ಟಲೆ ಮಾತನಾಡಿದವು. ನೆನಪಿನ ಸುರುಳಿ ಬಿಚ್ಚಲು ಪ್ರಾರಂಭವಾದರೆ ಕೊನೆ ಇದೆಯೆ ?

"ಬಾಳಿನ ಕುಂಟಾಟ ಹೇಗೆ ಸಾಗಿದೆ?" ನಾನು ಕೇಳಿದೆ.

"ನಾನು ಕುಂಟಾಟದಲ್ಲಿ ಯಾವಾಗಲೂ ಮುಂದು. ಗೊತ್ತಲ್ಲಾ ನಿನಗೆ. ಆದರೆ ಈಚೆಗೆ ಒಂಟಿ ಬೂದ್ನಿನ ಅಗತ್ಯವಿದ್ದರೂ ಸಿಗ್ತಾ ಇಲ್ಲ" ಅಂತ ಮಾರ್ಮಿಕವಾಗಿ ನುಡಿದಳು.

ಎಚ್. ಜಿ. ವೆಲ್ಸನ 'ಕಾಲಯಾನ ಯಂತ್ರ'ವೇನಾದರೂ ನಮಗೆ ಅಂದು ದೊರಕಿದ್ದರೆ, ಬಹುಶಃ ಹಿಂದೆ ನಮ್ಮ ಕಿವಿಗಳಲ್ಲಿ ಮೊಳಗಿದ್ದ ಅಶರೀರವಾಣಿಯತ್ತ ನಾವು ಧಾವಿಸುತ್ತಿದ್ದುದು ಖಂಡಿತ.



# ಪುರಸೊತ್ತಿಲ್ಲ

—ಶಾಂತಾ ರಘು

---

ಬುಧವಾರ ಮಧ್ಯಾಹ್ನ ನಮ್ಮ ಲೇಡೀಸ್ ಕ್ಲಬ್ಬಿನ ಮೀಟಿಂಗ್ ಇತ್ತು. ಮಧ್ಯಾಹ್ನ ಆದರೆ ಅಷ್ಟು ಹೊತ್ತಿಗೆ ಹೆಂಗಸರೆಲ್ಲ ಊಟ, ಕೆಲಸ ಎಲ್ಲಾ ಮುಗಿಸಿ. ಗಂಡಂದಿರು, ಮಕ್ಕಳನ್ನೆಲ್ಲಾ ಮನೆಯಿಂದಾಚೆ ಸಾಗ ಹಾಕಿ ಪುರಸೊತ್ತಾಗಿರ್ತಾರೆ. ಅಂತಲೇ ನಾವು ಆ ಟೈಮಿನಲ್ಲಿ ಮಹಿಳಾ ಮಂಡಲಿಯಲ್ಲಿ ಜಮಾಯಿಸ್ತಾ ಇದ್ವಿ.

ಸರಿ, 12–30 ಕ್ಕೆ ಗೆಳತಿ ಪರಿಮಳಾನೂ ಜತೆ ಮಾಡ್ಕೊಂಡು ಹೋಗೋಣ ಅಂತ, ಮುಂದಿನ ಬೀದೀಲಿದ್ದ ಅವಳ ಮನೆ ಸೇರಿ ಕರೆಗಂಟೆ ಒತ್ತಿದೆ. ನಿಶ್ಯಬ್ದ. ಎರಡು ನಿಮಿಷ ಬಿಟ್ಟು ಪರಿಮಳ ಬಾಗಿಲು ತೆರೆದಳು. ಕೆದರಿದ ಕೂದಲು. ಮುದುರಿದ ಇಳಕಲ್ಲು ಸೀರೆ. ಕೈಯಲ್ಲಿ ಮುಂಬಯಿ ವರಕೆ. ಮೈಯೆಲ್ಲಾ ಬೆವರಿನ ಸ್ನಾನ ………

“ಇದೇನೇ ಪರಿ ! ಮೀಟಿಂಗು ಮರ್ತೇ ಹೋಯಿತೆ ? ಇನ್ನ್ಯಾವಾಗ ನೀನು ರೆಡಿಯಾಗೋದು ? ”

ಪರಿಮಳ ಮಾತಾಡದೆ ಮನೆಯೊಳಗೊಂದು ಉರಿ ನೋಟ ಎಸೆದಳು. ಇಣಿಕಿದೆ. ಓಹೋ ! ಯಜಮಾನರು ಟೂರಿನಿಂದ ಬಂದಿದ್ದಾರೆ. ಅವರೇನೋ ಪೋಲೀಸು ಖಾತೆಯಲ್ಲಿ S. P.—ಆದ್ರೆ ಮನೇಲಿ ಬರೀ H. P. (ಅಂದ್ರೆ ಹೆನ್ ಪೆಕ್ಡ್) ಕೂತಿದ್ದರು. ಪೇಪರಿನ ಹಿಂದೆ ಶರಣಾಗತಿ ಪಡೆದಿದ್ದರು.

“ಯಾಕೆ ? ಕೆಲಸದ ಸಿದ್ದಮ್ಮ ಬರಲಿಲ್ವೆ ? ನೀನ್ಯಾಕೆ ಕಸ ಗುಡಿಸ್ತಾ ಇದೀಯಾ ?” ಎಂದು ಉರಿಯೋ ಬೆಂಕಿಗೆ ಸ್ವಲ್ಪವೇ ಸೀಮೆ ಎಣ್ಣೆ ಚಿಮುಕಿಸಿದೆ.

ಪರಿಮಳ ಹೊರಗೆ ಬಂದು ಕೂತಳು. ಬೆವರೊರಸಿದಳು. “ಇಲ್ವೆ. As usual ಚಕ್ಕರ‍್ರು. ಹಾಳಾದೋಳು ವೇಳಾದ್ರೂ ನಿಲ್ಬಾರ್ದ ? ನಾನ್ಯಾವ ಕೆಲಸಾಂತ ಮಾಡ್ಲಿ ? ಒಬ್ಬೊಬ್ಬ್ರಾದ್ರೆ ಮನೇಲಿ ತರಾವರಿ Gadgets ಇಟ್ಕೊಂಡು ಪಾಯಾಗಿರ್ತಾರೆ. ನಮ್ಮನೇಲಿ ಒಂದು Grinder ಏ, Washing machine ಏ ಏನಿದೆ ? ಒಂದಿನ ಕೆಲಸ್ದೋಳು ಬರ್ದೆ ಹೋದ್ರೆ ಪ್ರಾಣಾನೇ ಹೋಗತ್ತೆ.

ಪೆಸರಿಗೆ ನಾಲ್ಕಂಕಿ ಸಂಬಳ. ಏನು ಪ್ರಯೋಜನ ? ಎಲ್ಲಾ ಕೆಲಸ ನಾನೇ ಮಾಡಿ ಸಾಯ್ಬೇಕು.

ಇನ್ನೊಂದು ಸಲ ಒಳಗೆ ಹಣಿಕಿದೆ. ಅವಳ ಯಜಮಾನರು ಇನ್ನೂ ಪೇಪ ರಿನ ರಕ್ಷಣೆಯಲ್ಲೇ ಇದ್ರು.

ಮೆಲ್ಲಗೆ ಕೇಳಿದೆ– "ಯಾಕೇ ? ನಿಮ್ಮೆಜಮಾನ್ರು ಏನೂ ಕೊಡಿಸೊಲ್ಲ ಅಂತಾರ್ಯೆ ? "

"ಯಾಕ್ಕೊಡಿಸ್ತಾರೆ ? ಕೇಳಿದ್ರೆ ನಮ್ಮಮ್ಮ, ನಮ್ಮಜ್ಜಿ ಎಲ್ಲರೂ Washing machine ಊ, Vacuum cleaenr ಊ ಇಟ್ಕೊಂಡೇ ಸಂಸಾರ ಮಾಡಿದ್ರೆ? ಅಂತಾರೆ. ಅವರಮ್ಮ, ಅಜ್ಜಿ ಎಲ್ಲಾರ್ಗೂ Assist ಮಾಡೋಕೆ ಡಜನ್ ಗಟ್ಲೆ ನಾದಿನೀರು, ಓರಗಿತ್ತೀರು ಎಲ್ಲಾ ಇದ್ರು. ನನಗ್ಯಾರಿದ್ದಾರೆ ? " ಮುಸಿ ಮುಸಿ ಮಾತಾಡಿ, ಮೂಗೊರಸಿಕೊಂಡು, ಯಜಮಾನ್ರಿಗೆ ತನ್ನ ಮಾತು ಕೇಳಿಸ್ತೇ ಎಂದು ಬಗ್ಗಿ ನೋಡಿ, ಖಾತ್ರಿ ಮಾಡಿಕೊಂಡಳು.

ಸರಿ, ನಾನೂ ತಕ್ಕ ಹಾಗೆ Sympathy ಯ ಸದ್ದು ಮಾಡಿ ಎದ್ದೆ.

"ನೀನು ಹೊರಡೆ. ನಾನಂತೂ ಪಡಕೊಂಡು ಬಂದಿಲ್ಲ. ಮನೆ ಕೆಲಸ ಮಾಡಿ, ಮಾಡಿ ಫಳಿಗೆ ಪುರಸೊತ್ತಿಲ್ಲ. ಸುಸ್ತಾಯಿತಪ್ಪ ಇನ್ನು ನನಗೆ ಎಲ್ಲಾ ಕೊಡಿಸೋ ತನಕ ಬರೀ ಅನ್ನ ಸಾರೇ ಮಾಡೋದು. ಅವತ್ತೇ ಎಲ್ಲಾ ತೆಗೆದು ಕೊಟ್ಟಿದ್ದರೆ ಈ ತರಹ ಕೆಲಸದೋಳ ಮೇಲೆ Depend ಆಗ್ತಾ ಇದ್ನೆ ? ಎದುರ್ಮನೆ ರುಕ್ಮಿಣಮ್ಮ ಏನೂಂತೀಯಾ ? ಕೆಲಸದೋಳೇ ಇಟ್ಕೊಂಡಿಲ್ಲ, ಬೆಳಿಗ್ಗೆ 9 ಗಂಟೆ ಒಳಗೆ ಅಡಿಗೆ ಮುಗಿಸಿ, ಮನೆ ಕ್ಲೀನ್ ಮಾಡಿ, ಎರಡು ಬಕೀಟು ಬಟ್ಟೆ ಒಗೆದು ಹರವಿರ್ತಾರೆ. ಯಾರ ಹಂಗಿದೆ ಅವರಿಗೆ ? ಉಟ್ಟ ಬಟ್ಟೆ ನಲುಗೊಲ್ಲ, ಹಾಯಾಗಿ ಎಲ್ಲಾ Gadgets ಇಟ್ಕೊಂಡು Life ನ Enjoy ಮಾಡ್ತಾರೆ–ಪುಣ್ಯವಂತರು........" ಎಂದು ಪರಿಮಳ ಹಲುಬುತ್ತಾನೇ ಇದ್ದಳು.

ಮುಂದೆ ಎಂಟು ದಿನಕ್ಕೆ ಫೋನು ಬಂದೇ ಬಂತು. "Success ಕಣೆ ಶಾಂತ. ಕೊನೆಗೂ ಗೆದ್ದೆ. ಹೋದ ವಾರ ಒಂದು F. D. ಮೆಚೂರ್ ಆಯಿತು. ಬಿಡ್ಲಿಲ್ಲ ನಾನು. ಎಜಮಾನ್ರನ್ನ ಎಳಕೊಂಡೇ ಹೋಗಿ–ಎಲ್ಲಾ ಕೊಂಡು ಕೊಂಡು ಬಿಟ್ಟೆ" Mixer ಉ, Washing machine ಉ, Vacuum Cleaner, ಎಲ್ಲಾ... "

"ಹೌದೆ ? Congrats. ಇನ್ನೇನಮ್ಮ ನಿನಗೆ ಇಪ್ಪತ್ನಾಲ್ಕು ಗಂಟೇನೂ ಪುರಸೊತ್ತೆ ಬಿಡು. ಘಟವಾಣಿ ಕಣೆ ನೀನು ಪಾಪ—ನಿಮ್ಮೆಜಮಾನ್ರು ನೀನು ಹೇಳಿದ್ದಕ್ಕೆಲ್ಲಾ ತಲೆ—ತೂಗ್ತಾನೇ ಇರ್ತಾರೆ...

"ಹೌದು. ತೂಗ್ದೆ ಇನ್ನೇನ್ ಮಾಡ್ತಾರೆ. ಒಂದು ವಾರ ಬರೀ ಅನ್ನ ಸಾರು ತಿಂದು ಸಾಕಾಗಿರ್ಬೇಕು. O. K. ಬರ್ತೀನಮ್ಮ. Maixerನಲ್ಲಿ ಇಡ್ಲೀಗೆ ರುಬ್ಬೇಕು. Washing machineನಲ್ಲಿ ಬೆಡ್ ಷೀಟು ಬೇರೆ ಹಾಕಿದೀನಿ" ಎಂದು ಸಂಭ್ರಮದಿಂದ ಫೋನು ಕುಕ್ಕಿದಳು.

ಎರಡು ವಾರ ಬಿಟ್ಟು ಯಥಾ ಪ್ರಕಾರ ಮಧ್ಯಾಹ್ನ ಕ್ಲಬ್ಬಿಗೆ ಹೊರಟೆ. ಪರಿಮಳ ಮನೆ ಬಾಗಿಲು ಹಾಕಿತ್ತು. ಬೆಲ್ಲು ಮಾಡಿದೆ. ಸಮಾರು ಹೊತ್ತಿನ ಮೇಲೆ ಪರಿಮಳ ಬಾಗಿಲು ತೆರೆದಳು. ಕೆದರಿದ ತಲೆ–ಮುದುರಿದ ಇಳಕಲ್ಲು ಸೀರೆ. ಕೈಯಲ್ಲಿ ಮುಂಬಯಿ ಪರಕೆ ... ಮೈಯೆಲ್ಲಾ ಬೆವರಿನ ಸ್ನಾನ........

ನನಗೆ ರೇಗಿತು.

"ಇದೇನೇ ನಿನ್ನ ಅವತಾರ ! ಯಾವತ್ತೂ ಟೈಮಿಗೆ ಸರಿಯಾಗಿ ರೆಡೀನೇ ಆಗೊಲ್ವಾ ನೀನು ?"

"ಏನ್ಮಾಡ್ಲೆ. ಹಾಳು ಸಿದ್ದಮ್ಮ ಬರ್ಲೆ ಇಲ್ಲ. ಬೆಳಿಗ್ಗೆಯಿಂದ ಒಂದು ಘಳಿಗೆ ಪುರಸೊತ್ತಿಲ್ಲ. ಹ್ಯಾಗೆ ನಾನು ರೆಡಿಯಾಗೋದು ? ಇನ್ನೂ ಒಂದು ಕೆಲಸಾನೂ ಆಗಿಲ್ಲ......

ನನಗೋ ಪರಮಾಶ್ಚರ್ಯವಾಯಿತು.

"ಒಳ್ಳೆ ಚೆನ್ನಾಗಿದೆ ನೀನು ಹೇಳೋದು ! ಕೆಲಸದೋಳು ಬರದೇ ಇದ್ರೆ ಏನಂತೆ ? ಅಂಥ ದಿವಿನಾಗಿ ನಿಮ್ಮೆಜಮಾನ್ರು ಅಷ್ಟು Gadgets ತೆಗೆಸಿಕೊಟ್ಟಿದಾರೆ, ಮೊನ್ನೆ ಮೊನ್ನೆ. ಝಟ್ ಪಟ್ಟಂತ ಕೆಲ್ಸ ಮಾಡ್ಕೊಂಡು......"

"ಸುಮ್ನಿರೇಮ್ಮ. ಹೊಟ್ಟೆ ಉರಿಸ್ಬೇಡ. ಪಾಪಿ ಸಮುದ್ರ ಹೊಕ್ಕರೂ ಮೊಳದುದ್ದ ನೀರೇ— Gadgets ಇದ್ರೇನಂತೆ ? Mixer ಏನೋ ಒಂದೇ ನಿಮಿಷಕ್ಕೆ ಎಲ್ಲಾ ರುಬ್ಬುತ್ತೆ. ಆಮೇಲೆ ? ನಮ್ಮರುಬ್ಬೋ ಗುಂಡಿನ ತರಹ ಅದರ ತಲೇ ಮೇಲೆ ಅಷ್ಟು ನೀರು ಹುಯ್ದು ನಾಳೆ ತನಕ ನೆನೀಲಿ ಅಂತ ಬಿಡೋಕಾಗುತ್ಯೆ? ಅಷ್ಟನ್ನೂ ಬೇರೆ ಬೇರೆ ಬಿಚ್ಚಿ— ಬಿಸಿ ನೀರಲ್ಲಿ ತೊಳೆದು— ಕ್ಲೀನಾಗಿ ಬಟ್ಟೇಲಿ ಒರಸ್ಬೇಕು. Washing machine ಮಾತ್ರ ಏನಂತೆ ? ಹುಷಾರಾಗಿ ಆಕತೆ

ಮಾಡಿ ನೀರು ತುಂಬ್ಸಿ—ನೆನೆಸಿಟ್ಟಿರೋ ಬಟ್ಟೆಗಳನ್ನ ಎಣಿಸಿ ನಾಲ್ಕು ನಾಲ್ಕಾಗಿ ಹಾಕಿದ್ರೆ ನೆಟ್ಟಗೆ Wash ಸ್ವಲ್ಪ ಮಾಡತ್ತೆ. ಸೋಮಾರಿತನ ಪಟ್ಕೊಂಡು ಎರಡು ಬಟ್ಟೆ ಹೆಚ್ಚಿಗೆ ಹಾಕಿದ್ರೆ ನಿಟ್ಟುಸಿರು ಬಿಟ್ಕೊಂಡು ನಿಂತೇ ಹೋಗತ್ತೆ. ಆಮೇಲೆ ತಾನೆ ಏನು ? ಬಟ್ಟೇನೆಲ್ಲಾ ಜಾಲಿಸಿ, ಹಿಂಡಿ, ಒಣಗಿಸಿ, ಸಾಲದ್ದಕ್ಕೆ Machine ಅನ್ನೂ ಕ್ಲೀನಾಗಿ ತೊಳೆದು, ಒರಸಿ, Oil ಮಾಡಿ...ಏನ್ಮಹಾ ಕೆಲ್ಸ ಕಮ್ಮಿ ? ಇನ್ನು ಈ Vacuum cleanerಗೋ ತರಹಾವರಿ ಕೊಳವೆಗಳನ್ನ ಜೋಡಿಸಿ, ರೂಮು ರೂಮಿಗೂ Wire ಎಳ್ಳೂ ಎಳ್ದೂ... Plastic bagನಲ್ಲಿ ತುಂಬಿರೋ ಕಸಾನಾ ಹುಷಾರಾಗಿ ಖಾಲಿ ಮಾಡಿ... ಸಾಕಾಯ್ತಮ್ಮ ನನಗೆ... ಒಂದು ಘಳಿಗೆ ಪುರ ಸೊತ್ತಿಲ್ಲ" ಎಂದು ಒಂದೇ ಸಮನೆ ಗೋಳಾಡಿದಳು.

"ಹೋಗ್ಲಿ ಬಿಡು. ಹೇಗೂ ನಾನ್ಬಂದಿದೀನಲ್ಲ. Help ಮಾಡಲೇ ? ಪರಕೆ ಯಾಕಿಟ್ಟುಕೊಂಡಿದೀಯಾ ? ಕೊಡು Vacuum cleanerನ"

"ಅಯ್ಯೋ—ಎಲ್ಲಾ ನನ್ನ ಪಾರಬ್ಧ ಕರ್ಮ—ಕರೆಂಟೇ ಇಲ್ಲ" ಅಂದ್ಲು. ಸುಸ್ತಾದೆ.

o

---

ಹಿರಿಯ ನ್ಯಾಯಾಸ್ಥಾನದ ಹೊರ ಆವರಣದಲ್ಲಿ ದೊಡ್ಡ ದೊಡ್ಡ ಕಾರುಗಳು ನಿಂತಿದ್ದವು. ರಷ್ಯದವನೊಬ್ಬ ಅದನ್ನು ನೋಡಿ "ಹಣವಂತರ ಹಣೇ ಬರಹವೇ ಇಷ್ಟು, ಕೋರ್ಟು, ಕಛೇರಿ ಅಂತ ಕಾದಾಡ್ತಾನೇ ಇರ್ತಾರೆ" ಎಂದು ಟೀಕಿಸಿದ. ಅದಕ್ಕೆ ನಮ್ಮ ಮಾರ್ಗದರ್ಶಿಯ ಉತ್ತರ.

"ಈ ಕಾರುಗಳು ಕಕ್ಷಿಗಾರರದಲ್ಲ. ಲಾಯರುಗಳ್ದು. ಆ ಮರದ ಕೆಳಗೆ ಸಾಲಾಗಿ ನಿಂತಿವೆ ನೋಡಿ ಸೈಕಲ್ಲುಗಳು. ಅವು ಕಕ್ಷಿಗಾರರದ್ದು"

---

# ಹನುಮಪ್ಪನ ಹೇಳಿಕೆಗಳು

—ಹನುಮಪ್ಪ

ಹೇಳಿಕೆ–೪

ಮೇವಿಲ್ಲದ್‌ದನ

ಬ್ರಾಂಬ್ರು ಬ್ರಾಂಬ್ರು ಅಂತ ಬಡಕೊಂತಿದ್ರು
—ನಂ ಜನ ಅಂದ್ರೆನಾವ್ರು—ಅಂದ್ರೆ ಸೂದ್ರುರು ಅನ್ಕೊಂಡೋರು.

ಈಗ್ ನೋಡಿ, ಹುಟ್ಕೊಂಡವ್ರೆ,
ಬ್ರಾಂಬರ್ದೊಂದ್ ವೊಸಾ ಪಂಗ್ಡ;
ಈಗ, ಅವರ್ ಬೆರೆಯೋಕಿಲ್ಲ ನಮ್ಸಂಗ್ಡ,
ಹಿಂದೆ, ನಾವ್ ಬೆರೀತಿರ್ನಿಲ್ಲ ಅವರ್ಕೂಡ.

ಅವರ್ಯಾರು ಅನ್ಕೊಂಡ್ರಿ ?–ಸರ್ಕಾರಿ ಬ್ರಾಂಬ್ರು !
ಹ್ಞಾ ಸ್ವಾಮಿೂ ! ಸರ್ಕಾರಿ ಬ್ರಾಂಬ್ರು !
ಯೆಲ್ಲಾ ಕಡೀಕೂ ಮಿೂಸ್ಲಾತಿ ಮೆಂಬ್ರು !

ಅವರ್ಗಿಲ್ಲ ಜನ್ವಾರ,
ಸರ್ಕಾರ್ವೆ ಆದಾರ.

ಆದರ್ನೋಡಿ, ಹಳ್ಳೀಲವರ್ ಜನ
ಮೊದಲ್ಹಂಗೇಸೆ—ಮೇವಿಲ್ಲದ್ ದನ

ಕಾಲ

ಹೇಳಿಕೆ–೫

ಕಾಲ ಕೆಟ್ಕೋಯ್ತು, ಕಾಲ ಕೆಟ್ಕೋಯ್ತು
ಅಂತ ಒಂದೇ ಸಮ್ಕೆ ಬಡ್ಕೋತಾರೆ !
ಕಾಲ ಏನ್ ಮಾಡೀತು ಸಾಮಿ ?
ನಡದ್ಹಂಗೆ ನರ ಮನ್ಸ ಆಸಾಮಿ,

ನರಮುನ್ಸ ನಾಣ್ಯ –
ನಿನ್ನೆ ಬೆಲೆ ಇವತ್ತಿಲ್ಲ,
ಇವತ್ತ ಬೆಲೆ ನಾಳೀಕಿಲ್ಲ—
ಚಿನ್ನದ್ದು ಓಯ್ತು
ಬೆಳ್ಳೀದೂ ಓಯ್ತು
ತಾಮ್ರುದ್ದೂ ಓಯ್ತು –
ಕಾಜ್ಗದ್ ಚೂರಿನ್ ವ್ಯಾಗೆ
ಪತ್ತೊದ್ರೆ ಹತ್ತು
ನೂರೊತ್ತದ್ರೆ ನೂರು—
ನಾಣ್ಯದ್ಹಂಗೆ ನರ ಮನ್ಸ
ಬದ್ಲಾಗ್ತಾನೇ ಅವ್ನೆ
ಬದ್ಲಾಗ್ತಾನೇ ಅವ್ನೆ
ಕಾಲಕ್ಕೆದ್ರೆ ಒತ್ತಾನೂ ಅವ್ನೆ –
ಕಾಲಕ್ಕಾಲಿಲ್ಲ ಸಾಮಿ,
ನರ ಮನ್ಸ ನಡದ್ಹಂಗೆ ಕಾಲ ನಡೀತೈತೆ.
ಕಾಲಕ್ಬಣ್ಣ ಇಲ್ಲ ಸಾಮಿೂ,
ಮನ್ಸನ್ ಬಣ್ಣಾನೆ ಕಾಲದ್ ಬಣ್ಣ;
ಮನ್ಸ ಬಣ್ಣ ಬದ್ಲಾಯಿಸ್ದ್ಹಂಗೆ
ಕಾಲದ್ ಬಣ್ಣ ಬದ್ಲಾಗ್ತದೆ.
ಕಾಲಕ್ಬಾಯೀ ಇಲ್ಲ ಸಾಮಿೂ,
ಮನ್ಸ ಬಗಳ್ಕೋತಾನೇ ಇರ್ತಾನೆ,
ಕಾಲ ಮಾತ್ರ ತೆಪ್ಗಿರ್‍ತೈತೆ.
ಮನ್ಸ ಮಾಡಿದ್ದೂ ಆಡಿದ್ದೂ
ಉಳಕೊಂಡ್ರೆ,
ಕಾಲ ಜತ್ನ ಮಾಡ್ತು ಅಂತೀವಿ ;
ಅವು ಪೊಂಟೋದೆ,
ಕಾಲ ನುಂಗ್ತು ಅಂತೀವಿ.
ಎಲ್ಲ ನರ ಮನ್ಸನ್ ನಾಟ್ಕ ಸಾಮಿ
ಎಲ್ಲ ನರಮನ್ಸನ್ ನಾಟ್ಕ !

# ಹಾಸ್ಯ ಸಾಹಿತ್ಯಕ್ಕೆ ಪತ್ರಿಕೆಗಳ ಕೊಡುಗೆ

—ಎಚ್. ಎಲ್. ಕೇಶವಮೂರ್ತಿ

(ಹಿಂದಿನ ಸಂಚಿಕೆಯಿಂದ ಮುಂದುವರಿದ ಭಾಗ)

---

ಕನ್ನಡದ ಹಾಸ್ಯ ಸಾಹಿತ್ಯದಲ್ಲಿ ಉಂಟಾಗಿದ್ದ ಈ ದೊಡ್ಡ ಶೂನ್ಯವನ್ನ ಡಾ|| ಎಂ. ಶಿವರಾಂ ಕಂಡರು. ಅದನ್ನ ತುಂಬಬೇಕೆಂಬ ಹಂಬಲದ ಪರಿಣಾಮ– ಕನ್ನಡದಲ್ಲಿ ಹಾಸ್ಯ ಸಾಹಿತ್ಯವೆಂದರೆ ಥಟ್ಟನೆ ನೆನಪಿಗೆ ಬರುವ 'ಕೊರವಂಜಿ'. ಮೊದಲ ಸಂಚಿಕೆ ಹೊರ ಬಂದದ್ದು 1942ರ ಏಪ್ರಿಲ್ 1, ಮೂರ್ಖರ ದಿನ. ಅವತ್ತು ಉಗಾದಿಯೂ ಹೌದು. ಅದರ ನಾಮಕರಣ ಆದದ್ದೂ ಹೆತ್ತ ಡಾಕ್ಟರಿಂದಲೇ. ಅದಕ್ಕೆ ಅವರು ನೀಡಿದ ಕಾರಣ; "ಕನ್ನಡ ಸಾಹಿತ್ಯದಲ್ಲಿ ಜನಜೀವನ ಪ್ರತಿಬಿಂಬಿಸುವ ನಗು ಮುಖದ ಪತ್ರಿಕೆಗೆ, ಕಣಿ ಹೇಳುವ, ಅಂಕೆ ಸಂಕೋಲೆಗಳಿಲ್ಲದ, ಎದೆ ಸೂಚಿಸಿ ದಂತೆ ನಡೆವ, ಬೆರಳ ತುದಿಗಳಲ್ಲಿ ಬೊಂಬೆ ಕುಣಿಸುವ ಕೊರವಂಜಿಯು ಹೆಸರೇ ಅನ್ವರ್ಥ" ಲೋಕದ ಎಲ್ಲಾ ವಾರ್ತೆಗಳನ್ನೂ, ವಿಷಯಗಳನ್ನೂ ಕಣಿ ಹೇಳು ವಂತೆ ಹೇಳುವುದು ಕೊರವಂಜಿಯ ಗುರಿ. ಯಾವುದೇ ಒಂದು ಘಟನೆ—ಅದು ಸಣ್ಣದೇ ಇರಬಹುದು—ಕೊಂಕು ಕಣ್ಣಿನಿಂದ ನೋಡಿದರೆ ಹಾಸ್ಯ ಉಕ್ಕುತ್ತದೆ. ಇಡೀ ಜೀವನವನ್ನ ಕೊಂಕು ದೃಷ್ಟಿಯಿಂದ ಗಮನಿಸಿದರೆ ವೇದಾಂತದ ತಿರುಳು ಗೋಚರಿಸುತ್ತದೆ. ಈ ತಿಳಿವಿಗೆ, ಹಾಸ್ಯಕ್ಕೆ ಅಗತ್ಯವಾದ ಕೊಂಕು ದೃಷ್ಟಿ ಯನ್ನು ಕನ್ನಡಿಗರಲ್ಲಿ ಪ್ರಚಾರ ಮಾಡುವುದು ಕೊರವಂಜಿಯ ಉದ್ದೇಶ ಆಗಿತ್ತು. ಇದನ್ನು ಆಗ ಮಾಡುವುದಕ್ಕಾಗಿ ಹಾಸ್ಯದ ಎಲ್ಲಾ ಸಾಧ್ಯತೆಗಳನ್ನೂ ದುಡಿಸಿ ಕೊಂಡದ್ದು ಕೊರವಂಜಿಯ ವೈಶಿಷ್ಟ್ಯ.

ಹಾಸ್ಯ ಸಾಹಿತ್ಯ ಪತ್ರಿಕೆಯ ಯಶಸ್ಸಿಗೆ ಪ್ರಮುಖವಾಗಿ ಬೇಕಾದ ಪ್ರತಿಭಾ ವಂತ ಸಂಪಾದಕ, ಬರಹಗಾರರ ಬಳಗ ಎರಡೂ ಕೊರವಂಜಿಗೆ ದೊರೆಯಿತು. ಡಾ|| ಎಂ. ಶಿವರಾಂ, 'ರಾಶಿ' ಯಾಗಿ ಕೊರವಂಜಿಯ ಸಂಪಾದಕರಾದರು. ಆಳ ವಾದ ಇಂಗ್ಲಿಷ್ ಭಾಷೆಯ ಜ್ಞಾನ ಇದ್ದ ಇವರ ಮೇಲೆ ಪಂಚ್ ಪತ್ರಿಕೆಯ ಪ್ರಭಾವ ಅಪಾರ. ಕುಂತಲ್ಲಿ, ನಿಂತಲ್ಲಿ ಹಾಸ್ಯ ಚಟಾಕಿ ಹಾರಿಸುತ್ತಿದ್ದರು. ಅವರು ಬರೆದಿದ್ದೆಲ್ಲ ವಿನೋದಮಯ. ಕೊರವಂಜಿಯಲ್ಲಿ ಹುಡುಗ, ಹುಡುಗಿಯರ ಸ್ನೇಹ, ಮುದಿ ಚಪಲ, ಮೂಢನಂಬಿಕೆ ಇತ್ಯಾದಿಗಳ ಬಗ್ಗೆ ಓತಪ್ರೋತವಾಗಿ ಬರೆದರು. ಅಡಗೂಲಜ್ಜಿಗೆ ನೈಲಾನ್ ಸೀರೆ ತೊಡಿಸಿದರು; ಹಿಂದಘಟ್ಟದ ಸುಂದರಮ್ಮ

ಮುಂದಾದಳು; ಕೊರವ, ಅರವಾವೊದ್ದು, ಜಗ್ಗೋಜಿ ತಲೆ ಹಾಕಿದರು. ನೆಚ್ಚಿನ ಕವಿಗಳನ್ನ ಕೆಣಕಿ ಅಣಕ ಮಾಡಿದರು. ಅವರ ಬರಹದ ಒಂದು ಮಾದರಿ ಇದು;

ಹೆಬ್ಬಿಗುಬ್ಬಾಲೆಯ ಶುಕ್ರವಾರದ ಸಂತೆಗೆ ತಮ್ಮಣ್ಣ ಹೆಂಡಿರನ್ನ ಕರೆ ತಂದಿದ್ದ. ಮದುವೆಯಾಗಿ ಮೂರೇ ತಿಂಗಳಾಗಿತ್ತು. ಬತ್ತಾಸ್ ಅಂಗಡಿಯಿಂದ ಬಂದ ಘಮ ಘಮ ವಾಸನೆಯನ್ನು ಹಿಡಿದು "ಎಷ್ಟು ಪಸಂದಾಗೈತೆ ಆ ವಾಸ್ನೆ" ಎಂದಳು ಪುಟ್ಟ ಹೆಂಡತಿ: "ಹಂಗಾರೆ ಅಂಗಡಿ ತಾವೇ ಮೂರು ನಾಲ್ಕು ಬಾರಿ ಅಡ್ಡಾಡೋಣ, ಆದಷ್ಟೂ ವಾಸನೆ ಹಿಡಿದೇ ಬಿಡೋಣ" ಅಂದ ತಮ್ಮಣ್ಣ.

ಇಲ್ಲಿ ಕಾಣುವುದು ಓತಪ್ರೋತವಾದ ಹಾಸ್ಯವಲ್ಲ. ನಿರೂಪಣೆಯ ಮಧ್ಯೆ ನಗೆಯ ಗುಳ್ಳೆ. ಗಹಗಹಿಸಲು ಅವಕಾಶವಿಲ್ಲ; ತಿಳಿನಗೆಗೆ ಮೋಸ ಇಲ್ಲ.

ನಾ. ಕಸ್ತೂರಿ ಪ್ರಾರಂಭದಿಂದಲೂ ಕೊರವಂಜಿಯೊಂದಿಗಿದ್ದವರು. ನಾಕ ಹೆಸರಿನಲ್ಲಿ ಅವರು ಬಹಳಷ್ಟು ಲೇಖನಗಳನ್ನು ಈ ಪತ್ರಿಕೆಗೆ ಬರೆದಿದ್ದರೂ, ಸಂಪೂರ್ಣ ಹೊಸತನ ಕಂಡುಬಂದದ್ದು 'ಅನರ್ಥಕೋಶ'ದಲ್ಲಿ. ಇದು ಕೊರವಂಜಿಗೆ ಒಂದು ವಿಶೇಷ ತೊಡುಗೆ. ಆಗ ತಾನೆ ಕಾರಂತರ ಅರ್ಥಕೋಶ ಹೊರ ಬಂದಿತ್ತು. ಕಸ್ತೂರಿ ಅದರಿಂದ ಪ್ರಭಾವಿತರಾದರು. ನಾಕ, 'ಖಾರಂತ'ರಾದರು ಈ ಅಣಕು ಹೆಸರಿನಲ್ಲಿ ಅನರ್ಥಕೋಶ ಪ್ರಾರಂಭಿಸಿದರು. ಹೆಸರೇ ಸೂಚಿಸುವಂತೆ ಕೆಲವು ಪದಗಳಿಗೆ ಕೊಂಕು ಅರ್ಥ ನೀಡಿದರು.

ಅಕಾಲವೃಷ್ಟಿ — ವೈಜ್ಞಾನಿಕ ಅಥವ ಪರ್ಜನ್ಯ ಜಪತಪೋಪಾಯಗಳ ಮೂಲಕ ಮೋಡದಿಂದ ಮಳೆ ಹಿಂಡುವಿಕೆ.

ಅಕ್ರೂರ — ರಿಟೈರಾದ ಅಧಿಕಾರಿ.

ಉದ್ಗ್ರಂಥ — ಉದ್ದುದ್ದ ಬೆಳೆಸಿ ಬರೆಯಲಾಗಿರುವ ಗ್ರಂಥ; ಓದದೆ ಇದ್ದರೂ ಓದಿಲ್ಲ ಎಂದು ಹೇಳಿಕೊಳ್ಳಲು ಜನರು ನಾಚುವ ಗ್ರಂಥ.

ತೀರ್ಥಯಾತ್ರೆ — ಪಡಖಾನೆಗೆ ಪ್ರಯಾಣ.

ಈ ರೀತಿಯವು ಕೆಲವಾದರೆ, ಕೆಲವು ಪದಗಳು ತಮ್ಮಲ್ಲಿರುವ ಅಕ್ಷರವನ್ನು ಕಳೆದುಕೊಂಡು ಬೇರೆಯುವನ್ನು ಪಡೆಯುವುದರ ಮೂಲಕವೋ, ತಮ್ಮೊಳಕ್ಕೆ ಬೇರೆ ಅಕ್ಷರಗಳನ್ನು ಸೆಳೆದುಕೊಳ್ಳುವುದರ ಮೂಲಕವೋ ಕನ್ನಡ ಶಬ್ದ ಭಂಡಾರದ ಶ್ರೀಮಂತಿಕೆಯನ್ನು ಹೆಚ್ಚಿಸಿದವು

| | |
|---|---|
| ಆಜಾನು ಬಾಹು | ಈಜಾನುಬಾಹು—ಈಜುವುದಕ್ಕನುಕೂಲವಾಗುವಷ್ಟೆ ಉದ್ದವಾದ ಬಾಹುಗಳುಳ್ಳವನು ಆದ, |
| ಶರಣಾಗತ | ಚರಣಾಗತ—ಗಾಲಿಗೆ ಬಿದ್ದವ. |
| ನಸ್ಯಾಹಾರಿ | ನಸ್ಯಾಹಾರಿ—ಹೊಟ್ಟೆಗೆ ಹಿಟ್ಟಿಲ್ಲದಾಗ, ಮೂಗಿಗೆ ನಶ್ಯವೇರಿಸಿ, ಅದನ್ನು ಮರೆಯುವವ. |
| ಮಂಡೋದರಿ, | ಗಂಡೋದರಿ—ಬಂಜೆ |
| ಮನದನ್ನೆ | ಧನದನ್ನೆ—ವರದಕ್ಷಿಣೆಗಾಗಿ ಕೈ ಹಿಡಿದ ಸತಿ. |

ಪಕ್ವಾನ್ನ, ಕಕ್ವಾನ್ನ ಆಯ್ತು, ಸಹ್ಯಾದ್ರಿ ಅಸಹ್ಯಾದ್ರಿ ಆದರೆ ಅಂಬುಲೆನ್ಸ್, ಬೊಂಬುಲೆನ್ಸ್ ಆಯ್ತು. ಇಂತಹ ಪದಗುಚ್ಛಗಳ ಜೊತೆಗೆ ಇನ್ನೊಂದು ರೀತಿಯ ಪ್ರಯೋಗವೂ ಇಲ್ಲಿ ಆಯ್ತು. ಇಂಗ್ಲೀಷ್-ಕನ್ನಡ ಪದಗಳ ಕಸಿ ಆಗಿ ಹಾಸ್ಯ ಸಾಹಿತ್ಯಕ್ಕೆ ಮೆರಗು ನೀಡಿತು. ಉದಾಹರಣೆಗೆ ಕಿಕ್ಕಿರಿದು—ಒದ್ದು ಬೀಳಿಸಿ ಅನಂತರ ಇರಿಯುವುದು (ಇಂಗ್ಲೀಷಿನ KICK).

ಇಂಗ್ಲೀಷಿನಲ್ಲಿ ABROSE BIERCE ನ DEVIL'S DICTIONARY ಇದೆ; ಅಮೆರಿಕದ COMIC DICITONARY ಇದೆ. ಆದರೆ ಈ ಗ್ರಂಥಗಳಲ್ಲಿ ಹೊಸ ಪದಗಳ ಸೃಷ್ಟಿ ಆಗಿಲ್ಲ. ಇಂತಹ ಒಂದು ಶಬ್ದಕೋಶ ಹೊರ ದೇಶಗಳ ಯಾವ ಭಾಷೆಯಲ್ಲೂ ಇಲ್ಲ. ಭಾರತೀಯ ಭಾಷೆಗಳಲ್ಲಂತೂ ಇದು ನವೀನ.

ವಾರಾಂತ ವಾರ್ಷೋದ, ಸಂಡೇ ಪಿತಃ ತರಹದ ಪದಗಳನ್ನು ಬಳಸಿದರೆ ಇತರೆ ಬರಹಗಾರರು ತಮ್ಮ ಲಘು ಕವನಗಳಲ್ಲಿ, ಅಣಕುವಾಡುಗಳಲ್ಲಿ, ಲಿಮರಿಕ್ಕುಗಳಲ್ಲಿ ಇಂಗ್ಲೀಷ್ ಜೊತೆಗೆ ಇನ್ನಿತರ ಭಾಷೆಗಳನ್ನೂ ಕನ್ನಡ ಅಂಕಣದಲ್ಲಿ ಒಳಸಿದರು. ಅ. ರಾ. ಸೇ. ಅವರ 'ಭಕ್ಷಿ ವಿಜಯ'ದ ಕೆಲವು ಸಾಲು ಇವು;

"ಕ್ಯಾ ಭಕ್ಷಿ ಖಡಗಯಾ ಕ್ಯಾಹುವಾ" ಎಂದನವ
'ಆಜ್ ಚೆಕಿಂಗ್ ಪೈಕತೇ
Squad ಆಯಾ ಪೈಕತೇ
ಬೇಗ್ಲೂರ್‌ಸೆ; ಕಲ್ಲಜ್ಜ
ನ್ಯೂಸ್ ಭೇಜ್ಯಾ ಸಂರ್‍ಝೋರೆ' ಎಂದನಿವ.

ಇಂತಹ ಪ್ರಯೋಗಗಳು ಮಡಿವಂತರನೇಕರ ಕಣ್ಣು ಕೆಂಪು ಮಾಡಿದೆ; ಮೂದಲಿಕೆಗೆ ಗುರಿಯಾದುವು. ಆಗ ನಾಕ ಕೊರೆದರೊಂದು ಸರ್ವಜ್ಞ ವಚನ:

ಕನ್ನಡದಿ ಇಂಗ್ಲೀಷ್ ಕಿಂಚಿತ್ತು ಬೆರೆಸಲದು
ಸಿನ್ನುಗಳ ಲಿಸ್ಟಿನಲಿ ಫೈಯಿಸ್ಟು, ಅದರಿಂದ
ಫನ್ನಿಗೂ ಮಿಕ್ಸದಿರು, ಸರ್ವಜ್ಞ

ಲಘು ಕವನಗಳ ಜೊತೆಗೆ ಅಣಕುವಾಡುಗಳ ಮಹಾಪೂರವೇ ಕೊರವಂಜಿಯಲ್ಲಿ ಹರಿದು ಬಂತು. ರಾಶಿ, ಅ.ರಾ.ಸೇ. ನಾಕ, ರಾಮಿ ಇಂತಹವರೆಲ್ಲ ಈ ಪ್ರಕಾರದಲ್ಲಿ ತಮ್ಮ ಪ್ರತಿಭೆ ತೋರಿದರು. ಮೊದಲ ಬಾರಿಗೆ ಕನ್ನಡದಲ್ಲಿ ಲಿಮರಿಕ್ ಬರೆದ ಕೀರ್ತಿ ಎಚ್. ಎಸ್. ಬಿಳಿಗಿರಿಯವರದ್ದು. ಪ್ರಕಟಿಸಿದ ಹೆಮ್ಮೆ ಕೊರವಂಜಿಯದ್ದು.

ಟರುಕುಲದ ಸೋದರರು ಮೂವರಿಹರಂತೆ
ಮೋಷ, ಲಾಯು, ಡಾಕ್, ಎಂದು ಅವರ ಹೆಸರಂತೆ
ಮೋಷ್ ಬುದ್ಧಿ ಕೆಡಿಸಿದನು
ಡಾಕ್ ಮದ್ದು ಕುಡಿಸಿದನು
ಲಾಯು ಟರುವಿನ 'ಟ'ವನು ಕಿತ್ತೊಗೆದನಂತೆ.

ಭಾಷೆಯಲ್ಲಿಯೇ ಹಾಸ್ಯ ಹುದುಗಿರುತ್ತದೆ. ಕೊರವಂಜಿಗೆ ಮುಂಚೆ ಗ್ರಂಥಸ್ಥ ಭಾಷೆಯಲ್ಲಿ ಮಾತ್ರ ನಗೆ ಬರಹಗಳು ಬರುತ್ತಿದ್ದವು. ಆಡು ಭಾಷೆಯನ್ನು ಪ್ರಪ್ರಥಮವಾಗಿ ಸತ್ವಪೂರ್ಣವಾಗಿ ಬಳಸಿ, ದುಡಿಸಿಕೊಂಡವರು ಅ. ರಾ. ಸೇ. ದಾವಣಗೆರೆ, ಹರಿಹರ ಪ್ರಾಂತ್ಯದ ಗಂಡು ಭಾಷೆ ಬೆಳಕು ಕಂಡಿತು. ಮುಗಿಲುಹಳ್ಳಿ, ದಿಲ್‌ಬಹಾರ್ ಎಕ್ಸ್‌ಪ್ರೆಸ್, ಸಿನ್‌ಸಿನಾಟಿ ಸರ್ಕಲ್, ದುಬ್ಬೀರ್ಗ, ಸ್ಥಳೀಯ ವಿಶ್ವ ಸುಂದರಿ ಮೌಸಮಿ ಪತ್ರಿಕೆಗಳಲ್ಲಿ ಮೆರೆದರು. MIt Massachussets Institute of Technology) ಇವರ ಕೈಲಿ ಮುಗಿಲುಹಳ್ಳಿ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ ಆಗಿ ಅದರ ಬಂಡವಾಳವೆಲ್ಲ ಬಯಲಾಯ್ತು. ಆಡುಮಾತಿನ ಸೊಗಡು ನಾಡಿನಾದ್ಯಂತ ಹರಡಿತು.

ಕೊರವಂಜಿಯ ಮತ್ತೊಂದು ಕೊಡುಗೆ ವ್ಯಂಗ್ಯ ಚಿತ್ರ. ಕೊರವಂಜಿಯ ಕಾಡುಹುದುಗಿಯ ಮುಖ ಚಿತ್ರ ಮೊದಲ ಸಂಚಿಕೆಯಲ್ಲಿ ಬಂತು.

ಅದನ್ನು ಬರೆದವರು ಆಗ ನಾ. ಕಸ್ತೂರಿಯವರ ಚುರುಕು ವಿದ್ಯಾರ್ಥಿಯಾಗಿದ್ದ ಆರ್.ಕೆ.ಲಕ್ಷ್ಮಣ್. ಅವರನ್ನು ರಾಶಿಗೆ ಪರಿಚಯಿಸಿದವರೂ ನಾಕ. ಕೊರವಂಜಿಯಿಂದ ಲೇಖನಗಳಿಗೆ–ಜೋಕುಗಳಿಗೆ ಒಳ ಚಿತ್ರಗಳನ್ನು ಪ್ರಕಟಿಸುವ ಅಭ್ಯಾಸವಾಯ್ತು. ಆರ್.ಕೆ. ಲಕ್ಷ್ಮಣ್ ಅವರ ಮೊದಲ ವ್ಯಂಗ್ಯ ಚಿತ್ರ–ಭಾಷಣ ಕೇಳುತ್ತಿದ್ದವ ಆಕಳಿಸುವುದು-ನಾಕ ಅವರ 'ಉರಿಗಾಳು' ಜೊತೆಗೆ ಪ್ರಕಟವಾಯ್ತು. 25 ವರ್ಷಗಳ ನಂತರ ಕೊರವಂಜಿಯನ್ನು ನಿಲ್ಲಿಸಿದಾಗ ರಾಶಿ, ಅದೇ ಚಿತ್ರವನ್ನು ಮತ್ತೆ ಉಪಯೋಗಿಸಿಕೊಂಡು, ಅದೇ ಆಕಳಿಸುವ ಕನ್ನಡಿಗ 'ಕಾಡಿಗೆ ಹೋಗ್ತಿದ್ದೀನಿ ಅಂದೆಯಾ, ಕೊರವಂಜಿ ! ಇಷ್ಟು ದಿವಸವೂ ನೀನು ಇದ್ದದ್ದೂ ಗೊತ್ತಿರಲಿಲ್ಲಲ್ಲೇ !' ಎಂದು ಶೀರ್ಷಿಕೆ ಬರೆದರು.

ಕೆಲವು ವರ್ಷಗಳ ನಂತರ ಲಕ್ಷ್ಮಣ್ ಕೊರವಂಜಿಗ ಬರೆಯುವುದನ್ನು ನಿಲ್ಲಿಸಿದರು. ಇದರಿಂದ ಅದು ಬಡವಾಯಿತು. ಇದನ್ನು ತುಂಬಲು ರಾಶಿ ಮೂವರು ವಾಣಿಜ್ಯ ಕಲಾಕಾರರನ್ನೂ—ಅರಗಂ, ಕುಕ್ಕೆ, ಅನಂತಯ್ಯ—ಮತ್ತು ಆಗ ವಿದ್ಯಾರ್ಥಿಯಾಗಿದ್ದ ಸತ್ಯನಾರಾಯಣ ರಾವ್ ಕೆ. ನಾಡಿಗ್ ಅವರನ್ನೂ ವ್ಯಂಗ್ಯ ಚಿತ್ರ ಬರೆಯಲು ಪ್ರೋತ್ಸಾಹಿಸಿ, ಮಾರ್ಗದರ್ಶನ ನೀಡಿದರು. ಪ್ರತಿ ತಿಂಗಳ ಮೂರನೆಯ ಭಾನುವಾರ ರಾಶಿಯವರ ಮನೆಯಲ್ಲಿ ನಾಕ. ಜಿ. ಪಿ. ರಾಜರತ್ನಂ, ಟಿ. ಎನ್. ರಾಮಚಂದ್ರ ರಾವ್ ಅರಗಂ, ಕುಕ್ಕೆ, ಅನಂತಯ್ಯ, ನಾಡಿಗ್ ಸೇರುತ್ತಿದ್ದರು. ರಾಶಿ ವ್ಯಂಗ್ಯ, ವ್ಯಂಗ್ಯ ಚಿತ್ರಗಳ ಬಗ್ಗೆ ಅವರಿಗೆ ವಿವರಿಸೋರು. ಯಾವ ಯಾವ ವಸ್ತುಗಳನ್ನು ವ್ಯಂಗ್ಯ ಚಿತ್ರ ಮಾಡಬಹುದು ಎಂಬುದನ್ನ ತೋರಿಸೋರು. PUNCHನಲ್ಲಿನ ಚಿತ್ರಗಳನ್ನು ತೋರಿಸಿ ಹೀಗೆ ಬರೆಯಬೇಕು ಅನ್ನುವರು ಬೇರೆಯವರೂ ಸಲಹೆ ಕೊಡೋರು, ವ್ಯಂಗ್ಯ ಚಿತ್ರ ಬರೆಸೋರು. ಕೊರವಂಜಿಯ ಜೊತೆಯಲ್ಲಿಯೇ ನಾಡಿಗ್ ಒಬ್ಬರನ್ನು ಬಿಟ್ಟು ಉಳಿದವರು ಈ ಕ್ಷೇತ್ರದಿಂದಲೇ ದೂರ ಉಳಿದರು.

ಕೊರವಂಜಿಯ ಬರವಣಿಗಾರರ ಬಳಗ ದೊಡ್ಡದು. ದಾಶರಥಿ ದೀಕ್ಷಿತರ ದಫೇದಾರ್ ದೇರಣ್ಣ, ಗಾಂವರೊಡೆಯರು ತಮ್ಮ ಪ್ರತಾಪ ಬೀರಿದ್ದು ಇಲ್ಲಿ. ವಾಂದು ರಂಗರಾಯರಿಗೆ ನೋವಾಗದಂತೆ ಶೌರಿ ಅವರ ಸಿಕ್ಕು ಬಿಡಿಸಿದ್ದು, ಮಂಗೇಶಿ ನಾಗತೆ ಓಡಾಡಿದ್ದು, ಪ್ಯಾಗಳ್ಳರ ಸಂಘ ಹುಟ್ಟಿಕೊಂಡದ್ದು ಕೇಫರಿಂದ ಕೊರವಂಜಿ ಅಂಕಣ

ದವು: ಟಿ. ಸುನಂದಮ್ಮನವರ ಮೈಲಾರಯ್ಯ ದಂಪತಿಗಳಿಗೆ ಮೈದಾನ ಇದಾಯ್ತು. ರಾಜರತ್ನಂ. ಟಿ. ಎಸ್. ಆರ್., ಬಿಸ್ರಾ, ಹಾರಾ. ಜಿಬುಜ್, ಅಷ್ಟಾವಕ್ರ, ರಾಮಿ, ಅ.ರಾ. ಮಿತ್ರ, ಅಕ್ರೂರ. ಬುಳ್ಳ ಇವರೆಲ್ಲ ಅದರ ಬಳಗದವರೇ. ಗಂಭೀರ ಸಾಹಿತಿಗಳೆಂದು ಹೆಸರಾದ ಶಿವರಾಮ ಕಾರಂತ, ಶ್ರೀರಂಗರೂ ತಮ್ಮ ಲೇಖನಗಳಿಂದ ಕೊರವಂಜಿಯ ಶ್ರೀಮಂತಿಕೆ ಹೆಚ್ಚಿಸುತ್ತಿದ್ದರು.

(ಸಶೇಷ)



"ಬೊಂಬೆಗಳ ಮೇಲೆ ತೆರಿಗೆ ತೆಗೆದಿದಾರಂತೆ. ಇನ್ನೊಂದಿಷ್ಟು ಬೊಂಬೆ ಕೊಡಿಸಮ್ಮಾ !"



"ಆತನ ಜಂಭ ! ನೋಡಿ ಸಾರ್  ಹಿಂದೆ ನಿಂತಿರುವವರ ಜ್ಞಾನವೇ ಇಲ್ದೆ
ಕೋಲಿಂದ ನನ್ನ ಎದೆ ತಿವಿದ್ಬಿಟ್ಟು ಹೋಗ್ತಾ ಇರೋದು......"

# [illegible] ಮತ್ತು ಬೇಂದ್ರೆ

[illegible]

ಫೆಬ್ರುವರಿ ಇಪ್ಪತ್ತೊಂಭತ್ತು.

ಬಜೆಟ್ ಮೇಲಿನ ಟಿ. ವಿ. ಸುದ್ದಿ, ಅದರ ನಂತರದ ಚರ್ಚೆ ಎಲ್ಲವನ್ನೂ ವಿವರವಾಗಿ ಕೇಳಿದ್ದೆ. ಹಣಕಾಸಿನ ವ್ಯವಹಾರಕ್ಕೂ, ನನಗೂ ಸ್ವಲ್ಪ ಎಣ್ಣೆ ಸೀಗೇಕಾಯಿ ಸಮಾಚಾರ. ಅಬಕಾರಿ ಸುಂಕ, ತೆರಿಗೆ, ರಿಯಾಯಿತಿ, ಬಡ ರೈತ, ಅಡ್ವೆಲೋರಂ, ಹಣದುಬ್ಬರ, ಎಲ್ಲ ಪದಗಳೂ ನನ್ನ ಮನಸ್ಸಿನಲ್ಲಿ ಕಲಸುಮೇಲೋಗರವಾಗಿದ್ದವು. ಆದರೂ ಟಿ. ವಿ. ನೀಡಿದ್ದನ್ನೆಲ್ಲಾ ಭಕ್ತಿಯಿಂಗ ಸ್ವೀಕರಿಸಿ, ಹೆಂಡತಿ ಮಾಡಿದ್ದ ಈರುಳ್ಳಿ ಗೊಜ್ಜು, ಹುರುಳೀ ಹಪ್ಪಳಾನ ಗಡದ್ದಾಗಿ ಮೆದ್ದು, ದಿಂಬಿಗೆ ತಲೆಯಿಟ್ಟೆ. ನಿದ್ದೆ ಝೊಕಾಯಿಸಿಕೊಂಡು ಬಂತು.

* * * *

ದಾರಿಯಲ್ಲಿ ಹೋಗುತ್ತಿದ್ದೆ. ಹಿರಿಯ ವ್ಯಕ್ತಿಯೊಬ್ಬರು ಎದುರಿಗೆ ಸಿಕ್ಕರು. ಯಾರು ಅಂತೀರ? ಬೇಂದ್ರೆ! ಹೌದು ಸ್ವಾಮಿ, ಸಾಕ್ಷಾತ್ ದತ್ತಾತ್ರೇಯ ರಾಮಚಂದ್ರ ಬೇಂದ್ರೆ! ಇನ್ನೂ ವಿಚಿತ್ರ ಅಂದರೆ, ಅವರನ್ನ ಕಂಡ ಕೂಡಲೇ, ಬಜೆಟ್ ಬಗ್ಗೆ ಅವರನ್ನು ಸಂದರ್ಶಿಸುವ ಆಶೆ ಹಠಾತ್ತನೆ ಉದ್ಭವಿಸಿತು. ಶುರು ಮಾಡಿಯೇ ಬಿಟ್ಟೆ.

ನಾನು — ನಮಸ್ಕಾರ ಬೇಂದ್ರೆಯವರೇ. ನಾಡಿನ ವರಕವಿಗಳಾದ ನಿಮ್ಮನ್ನು ಭೆಟ್ಟಿಯಾದದ್ದು ನನ್ನ ಸುಯೋಗ. ಬಜೆಟ್ ಬಗ್ಗೆ ನಿಮ್ಮನ್ನು ಸಂದರ್ಶಿಸುವ ಆಶೆ. ಆದರೆ ಈ ಬಗ್ಗೆ ನಿಮಗೆ ಸಂಪೂರ್ಣ ಅಜ್ಞಾನವಿದ್ದು ಅಭಾಸವಾಗುತ್ತೇನೋ ಎಂಬ ಶಂಕೆ. ಏನು ಹೇಳ್ತೀರ?

ಬೇಂದ್ರೆ — ಇನಿಸು ತಿಳಿಯದ ಮೂಢನೆಂದು ಬಗೆದೆಯೆ ನನ್ನ
ಇದು ಯಾವ ಊರ ಚದುರು?

ನಾನು — ಸಂತೋಷ. ಮೊದಲ ಪ್ರಶ್ನೆ. ಅಲ್ಯೂಮಿನಿಂ ಮೇಲಿನ ಅಬ್ಕಾರಿ ಸುಂಕ 25% ರಿಂದ 15%ಗೆ ಇಳಿಸಿದ್ದಾರಲ್ಲ. ಇದರಿಂದ ಸರ್ಕಾರಕ್ಕಾದ ನಷ್ಟ ಎಷ್ಟು?

ಬೇಂದ್ರೆ — ಮೂವತ್ತು ಮೂರು ಕೋಟಿ!

ನಾನು   ಕರೆಕ್ಟ್. ಈಗ ನೋಡಿ. ಬರಪೀಡಿತ ಪ್ರದೇಶಗಳ ಬಡ ಜನತೆ ಯಾವ ಪ್ರತಿಕ್ರಿಯೆ ತೋರಿಸ್ತಿದ್ದಾರೆ ತಿಳಿಸ್ತೀರ ?

ಬೇಂದ್ರೆ : ಮಣ್ಣಿನಲಿ ಅನ್ನವನು ಹುಡುಕುತಿವೆ ಕಣ್ಣುಗಳು......
ಬಾನ ತುಂಬಿದೆ ಶಂಖನಾದ.

ನಾನು   ಹಾಗೇನು ಹಣದುಬ್ಬರ 9.8%ಗೆ ಏರಿದೆ. ಬೆಲೆಗಳು ಗಗನ ಮುಟ್ಟಿವೆ. ನಿಮ್ಮ ಅನಿಸಿಕೆ ?

ಬೇಂದ್ರೆ   ಇಳಿದು ಬಾ ತಾಯಿ, ಇಳಿದು ಬಾ

ನಾನು   ಬೇಂದ್ರೆಯವರೇ, ಬಜೆಟ್‌ಗೆ ಮುಂಚೇನೇ ಸರ್ಕಾರ ಪೆಟ್ರೋಲ್ ಬೆಲೆ, ರೇಲ್ವೇ ದರ ಎಲ್ಲಾ ಏರಿಸಿ, ಬಡ ಪ್ರಜೆಯ ಹೊಟ್ಟೆ ಮೇಲೆ ಹೊಡೆದಿದೆ ಯಲ್ಲಾ, ಸರ್ಕಾರದ ಬಗ್ಗೆ ನಿಮ್ಮ ಅಭಿಪ್ರಾಯ ?

ಬೇಂದ್ರೆ   ಮೊನ್ನೆರಿಯು ಮ್ಯೆ ಬಣ್ಣ, ಚಿಂದ ಕಾರುವ ಕಣ್ಣ
ಎಂಟೆದೆಯ ಮುಲಿರಾಯ ನಂಟ ನೀನು
"ಕವದು ಕಂಟಕವಿಲ್ಲದೀ ಹುಲ್ಲೆ ಸವಿ ಮೇವು"
ಎನುವೆ ಅದು ತಿಂದಂಥ ಗಂಟು ಏನು ?

ನಾನು   ಅದೂ ಸರಿ ಅನ್ನಿ, ತೋಳ–ಕುರಿಮರಿ ಸಮಾಚಾರ. ಅದಿರಲಿ ತೆರಿಗೆ ಕೊಡದೇ ಕಪ್ಪು ಹಣ ಸಂಗ್ರಹಿಸೋರಿಗೆ ನಿಮ್ಮ ಸಲಹೆ ?

ಬೇಂದ್ರೆ   ತಿಣಿ ತಿಣಿಕಿ
ಇಣಿ ಕಿಣಿಕಿ
ಒಳ ಹೊರಗ ಹಣಿ ಹಣಿಕಿ
ನಾಣಾತು ಸುಳ್ಳೆಣಕಿ–ಚುಣಿಯೋಣು ಬಾರ

ನಾನು   ಬಜೆಟ್ ನಂತರದ ನಿಮ್ಮ ವೈಯಕ್ತಿಕ ಪರಿಸ್ಥಿತಿ ಹೇಗೆ ?

ಬೇಂದ್ರೆ : ಬರಿಗೈಲಿ ಮೊಳ ಹಾಕಿ, ಬಯಲ ಸುತ್ತಿದೆನಷ್ಟೆ !

ನಾನು   ಕೊನೆಯದಾಗಿ ತಿವಾರಿಯವರಿಗೆ ನೀವು ಹೇಳುವುದು ಏನಾದರೂ ಇದೆಯೆ ?

ಬೇಂದ್ರೆ : ನನ್ನ ಹರಣ, ನಿನಗೆ ಶರಣ.

ನಾನು   ಧನ್ಯವಾದಗಳು. ಹೋಗಿ ಬರುತ್ತೇನೆ. ನಮಸ್ತೆ.

* * * *

ಎಚ್ಚರವಾಗಿತ್ತು. ಹಾಸಿಗೆ ಪಕ್ಕದಲ್ಲಿ ಅಂಬಿಕಾತನಯದತ್ತರ ಕವನ ಸಂಗ್ರಹ 'ಗರಿ' ಬೋರಲಾಗಿ ಬಿದ್ದಿತ್ತು. ತೆಗೆದು ಕಪಾಟಿನಲ್ಲಿಟ್ಟೆ.

# ಅರಸಿಯ ಒಸುಗೆ

—:ನಿರುದ್ಯೋಗ ಖಂಡ:—

ಅ. ರಾ. ಸೇ.



ನರಕದ ಚತುರ್ದಶಿಯ ಹಬ್ಬ ! ಹಸಿವಾಗಿತ್ತು
ಕತ್ತಲದು ಲೋಕವನು ಮುತ್ತಲಿತ್ತು
ಕಾಲುದಾರಿಯುಲಿದು ಪಾರ್ಕಿನಲಿ ಕುಳಿತಿದ್ದೆ
ಕಲ್ಲು ಬೆಂಚಿನಲಲ್ಲಿ ಇದ್ದರೇಸೊ ಜನ.

ಪುರುಷಾವತಾರಗಳು ಭಾರತೀ ಸುತರವರು
ಮೂವತ್ತು ಮೂರು ಕೋಟಿಯ ಅಂಶದವರು
ಹರಟೆ ಹೊಡೆವರು ಕೆಲರು. ಮೂಕರುಳಿದವರೆಲ್ಲ
ಚಿಂತೆಯಾಹೆಂತರದ ಇರುವ ಕಂಡವರು.

ಪೇಳ್ದನವರೊಳಗೊಬ್ಬ "ನನ್ನ ಸೃಷ್ಟಿಸಿದವನು
ಬೆಳೆಸಿ ಡಿಗ್ರಿಯ ಕೊಡಿಸಿ ಇಟ್ಟಿರುವನಿಂತು
ಕೆಲಸ ದೊರೆಯದು ನನಗೆ, ಸಿಗದಿದ್ದರೊಳಿತಾಯ್ತು
ಕೋಟಿಜನರೆನ್ನಂತೆ ಏಟ ತಿನುತಿಹರು.

ಇನ್ನೊಬ್ಬ ನಿಂತೆಂದ "ಬೆಪ್ಪೊ ಹುಚ್ಚೋ ನಿನಗೆ
ಎರಡು ಸಾವಿರ ಕೋಟಿಯನು ಖರ್ಚುಮಾಡಿ
ಪಂಚವಾರ್ಷಿಕದಿ ತೊಡಗಿಹುದೆಮ್ಮ ಸರಕಾರ
ಲಂಚಕೊಟ್ಟರೆ ಕೆಲಸ ಕರತಲಾಮಲಕ.

ಚಣ ಕಾಲ ಮೌನ ಬಾಯ್ತೆರೆದನೊಬ್ಬನು ಬಚ್ಚ
ಭಿಕ್ಷಾನ್ನ ಸಂಘಕ್ಕವನೆ ಕಾರ್ಯದರ್ಶಿ
"ಗೂನನಾದೆನು ನಾನು ಘುಸ್ಸಿ ಮುಹಮದ ಶಿಷ್ಯ
ಮೂರು ಪಾರ್ಟಿವೆ, ಮೇಷ್ಟರಿಗೆ ದಯೆಯೆ ಇಲ್ಲ"

ಮತ್ತೊಬ್ಬನಿಂತೆಂದ ತಲೆಹರಟೆ, ಕಮ್ಯುನಿಸ್ಟ್
ಇರಬಹುದು "ಲೋಕಕಾರ್ಮಿಕರೇ ಒಂದಾಗಿ!
ತಲೆಕೆಳಕು ಜಗದಲ್ಲಿ ಕುಣಿತಕ್ಕೆ ಬೆಲೆಯಿಲ್ಲ
ಹಿಡಿದು ಸುತ್ತಿಗೆಯ ಕುಡುಗೋಲು ಹೊರ ಹೊರಡಿ"

ಕುಳಿತು ಕೇಳುತಲಿದ್ದ ನಾನೆಂದೆ "ಮಿತ್ರರಿರ
ಹಾಳಾಗಲಿಹುದ ಜಗ ಚಿಂತಿಸುವಿರೇಕೆ
ಕಾಫಿ ಬಟ್ಟಲನೆತ್ತಿ ತುಟಿಗೆ ! ಒಣಗಿದ ದೇಹ
ಚೇತನವ ಕಾಣುವುದು, ಸಾಕು ಮಾತು"

*　　*　　*　　*

ಬಾಲ್ಯದಲಿ ನಾನಂದು ಕಾಲೇಜಿನೊಳಗಿರಲು
ಕೇಳಿ ಪ್ರೊಫೆಸರುಗಳೆಲ್ಲರ ಬುರುಡೆಗಳನು
ಪೀಸಿಯುಮ್ಮಿಸಲಿ ಪಲ್ಟಿಯ ಹೊಡೆದು, ಹಿಂತಿರುಗಿ
ಬೆಂಗಳೂರಿಂ ಬಂದೆ ಮಂಗನಾಗಿ.

ಮತ್ತೆ ಸೆಪ್ಟಂಬರಿಗೆ ಕೂತೆ, ಅಲ್ಲಿಯು ಸೋತೆ
ಬರಿದಾಯ್ತು ಜೇಬು, ಬರಡಾಯ್ತು ಬುದ್ಧಿ
ಕತ್ತೆಯಾದೆನು ಬಳಿಕ ಹೊಳೆಯಿತೆನಗೀ ಸತ್ಯ
ಕಾಫಿ ಪುಡಿಯೊಲು ಬಂದೆ ಚರಟದೊಲು ಪೋಪೆ.

ಉದ್ದಗಲ ಆಳದ ತ್ರಿಗಾತ್ರದೀ ವಿಶ್ವವಿದು
ಕಾಲದ ಚತುರ್ಥ ಗಾತ್ರದಲಿ ಸಂಚರಿಪ
4–Dಈ ಚಲಚ್ಚಿತ್ರ, ಡೈರೆಕ್ಟ'ರಿಲ್ಲಪ್ಪ'
ನಾನೆ ಹೀರೋ ! ಮುಗದೆ, ನೀನೆ ಹೀರೋಯಿನ್ !

ಬಾ ! ಆರಾಸೆಯ ಜೊತೆಗೆ, ಸಖಿ, ನಿರಾಶೆಯ ತೊರೆದು
ಬೋರಗಳೆಯೀ ವಿಶ್ವವನ್ನು ಗಣಿಸದಿರು
ಹೀರಿ ಕಾಫಿಯ, ಮೀರುವಾನಂದದಲಿ ಬೆರೆದು
ಜೀವನವನನುಭವಿಸು, ಮರೆತು ಚರ್ಚೆಯನು.

---

ಬೆಳಿಗ್ಗೆ ಮುಖ ಕ್ಷೌರಕ್ಕೆ ತೊಡಗಿದಾಗ ರಮೇಶ ಬೊಬ್ಬೆಯಿಟ್ಟ:
"ಯಾರೋ ನನ್ನ BLADEನ ಮುಟ್ಟಿದೋರು ?"
"ಯಾಕೆ ಏನಾಯ್ತು ?" ಪತ್ನಿ ಚಂಪಾಳ ಕಳಕಳಿಯ ಪ್ರಶ್ನೆ.
"BLADE ಮೊಂಡಾಗಿದೆ !"
"ಅದು ಹೇಗೆ ಸಾಧ್ಯರೀ, ನಿನ್ನೆ ನಾನು ಪೆನ್ಸಿಲ್ ಜೀವಿದಾಗ ಹರಿತವಾಗೇ ಇತ್ತಲ್ಲಾ"

---

# ಬದನೆಕಾಯಿ ಪುರಾಣ

—ಶೈಲಜಾ ಪ್ರಭಾಕರ

---

ಗಂಡ ಹೆಂಡಿರಿಬ್ಬರೂ ಕೆಲಸಕ್ಕೆ ಹೊರಟುಬಿಟ್ಟರೆ ಅಡಿಗೆ ಮನೆಯ ಪಾಡು ಹೇಳತೀರದ್ದಾಗಿ ಬಿಡುತ್ತದೆ. ಒಬ್ಬೊಬ್ಬರು ಒಂದೊಂದು ಪಾಳಿಯಲ್ಲಿ ಕೆಲಸ ಮಾಡುವಂತಿದ್ದರೆ ಅದನ್ನು ಊಹಿಸಲೂ ಕಷ್ಟ. ನಾನು ಈಚೆಗೆ ಭೇಟಿಯಾದ ದಂಪತಿಗಳ ಪಾಡು ಹೀಗೇ ಇತ್ತು. ಆತನನ್ನು ಶ್ರೀಮಾನ್ ಎನ್ನೋಣ. ಆಕೆಯನ್ನು ಶ್ರೀಮತಿ ಎನ್ನಬಹುದಲ್ಲ. ಆಕೆಯದು ತಿಂಗಳಲ್ಲಿ ಹತ್ತು ದಿನ ಬೆಳಗಿನ ಜಾವ ಹೋಗಿ ಮಧ್ಯಾಹ್ನ ಬರುವುದು ಮತ್ತು ಇನ್ನು ಹತ್ತು ದಿನ ಹತ್ತರಿಂದ ಐದು ಮತ್ತು ಇನ್ನು ಹತ್ತು ದಿನ ಮಧ್ಯಾಹ್ನದ ನಂತರ ಹೋಗಿ ರಾತ್ರಿ 12ಕ್ಕೆ ಹಿಂದಿರುಗುವುದು. ಆತನದು ಎರಡು ಬಗೆ (ಪುಣ್ಯ !) ಬೆಳಗಿನ ಜಾವ ಹೋದರೆ ಮಧ್ಯಾಹ್ನ ಬರುವುದು ಇಲ್ಲವೇ ಮಧ್ಯಾಹ್ನ ಹೋಗಿ ಮಧ್ಯ ರಾತ್ರಿ ಹಿಂದಿರುಗುವುದು. ನನಗಂತೂ ಅವರ ಸಂಸಾರ ಕಂಡು ಆಶ್ಚರ್ಯವೂ ಕನಿಕರವೂ ಆಯಿತು. ಒಬ್ಬರನ್ನೊಬ್ಬರು ಮಾತನಾಡಿಸುವುದು ಯಾವಾಗ ? ಫೋನ್ ಇದೆಯಲ್ಲಾ ಎಂದುತ್ತರ ಬಂತು.

ಶ್ರೀಮತಿಯವರು ಒಂದು ನೋಟ್ ಬುಕ್ ತಂದರು. "ನಾವು ಅಡಿಗೆಯ ವಿಷಯಗಳನ್ನು ಹೀಗೆ ವಿನಿಮಯ ಮಾಡಿಕೊಳ್ಳುತ್ತೇವೆ. ಇಲ್ಲದಿದ್ದರೆ ಬೇರೆ ವಿಷಯ ಮಾತನಾಡಲು ಪುರುಸೊತ್ತೇ ಸಿಗುವುದಿಲ್ಲ" ಎಂದರು. ನೋಟ್ ಬುಕ್ ಆಗಲೇ ಅರ್ಧದಷ್ಟು ಮುಗಿದಿತ್ತು. ಇಬ್ಬರದೂ ಮುತ್ತಿನಂಥ ಕೈ ಬರಹ; ತಾರೀಖು ವೇಳೆಗಳ ಅಚ್ಚುಕಟ್ಟುತನ. ಅದರ ಬಗ್ಗೆ ಮೆಚ್ಚುಗೆ ಸೂಚಿಸಿದಾಗ ಆಕೆ, "ಓದಿ ಪರವಾಗಿಲ್ಲ. ಎಲ್ಲಾ ಅಡಿಗೆ ವಿಷಯ, ಅಷ್ಟೇ. ಅಷ್ಟರಲ್ಲಿ ಕಾಫಿ ಮಾಡುತ್ತೇನೆ. ಇವರೂ ಬರುತ್ತಾರೆ" ಎಂದರು. ಪುಸ್ತಕ ಸದ್ದುಗದ್ದಲವಿಲ್ಲದೇ ಓದಿಸಿಕೊಂಡು ಹೋಯಿತು. ಒಂದು ಪುಟ ಮಾತ್ರ ಸ್ವಾರಸ್ಯವಾಗಿತ್ತು. ಆ ದಂಪತಿಗಳ ಅನುಮತಿ ಪಡೆದು ನಿಮ್ಮ ಮುಂದಿಡುತ್ತಿದ್ದೇನೆ.

ಮಂಗಳವಾರ, ಮಧ್ಯಾಹ್ನ 3 ಗಂಟೆ.

......ನಿಮ್ಮ ಇಷ್ಟದಂತೆ ಬದನೆಕಾಯಿ ಪಲ್ಯ ಮಾಡಿದ್ದೇನೆ. ಅದರೊಡನೆ ನಾನೂ ಒಲೆಯ ಮುಂದೆ ಬೇಯುತ್ತಾ ನಿಲ್ಲಬೇಕಾಯಿತು. ಇಂಥ ಅಡಿಗೆಗಳನ್ನು ಇನ್ನು ಮೇಲೆ ಮಧ್ಯಾಹ್ನದ ಧಗೆಯಲ್ಲಿ ಮಾಡುವುದಿಲ್ಲ.......

ಶ್ರೀಮತಿ

ಮಂಗಳವಾರ ಸಾಯಂಕಾಲ 6–00

......ಬದನೆಕಾಯಿ ಪಲ್ಯ ತುಂಬಾ ಚೆನ್ನಾಗಿದೆ. ಇದನ್ನು ಮಾಡಲು ನೀನು ಅಷ್ಟೊಂದು ಕಷ್ಟಪಡಬೇಕಾಗಿರಲಿಲ್ಲ. (ಸ್ವತಃ ಬೇಯದೇ) ಪಲ್ಯ ಮಾಡುವ ವಿಧಾನ ಹೀಗಿದೆ—ಬಾಂಡಲಿ ಎಣ್ಣೆಯಲ್ಲಿ ಬದನೆಕಾಯಿ, ಪುಡಿ ಉಪ್ಪು ಇತ್ಯಾದಿ ಎಲ್ಲವನ್ನೂ ಚೆನ್ನಾಗಿ ಕಲೆಸಿಟ್ಟುಕೊಂಡು, ಆಮೇಲೆ ಒಲೆಯ 'ಮೇಲಿಟ್ಟು ಮುಚ್ಚಳ ಭದ್ರವಾಗಿ ಮುಚ್ಚಿ, ಅಡಿಗೆ ಮನೆಯಿಂದ ಹೊರಗೆ ಬಂದು ಪೇಪರ್/ ಮ್ಯಾಗಝೀನ್ ಓದಬಹುದು. ಐದು ನಿಮಿಷದ ನಂತರ ಒಂದು ಸಲ ಚೆನ್ನಾಗಿ ಕೆದಕಿ, ಮತ್ತೆ ಮುಚ್ಚಳ ಮುಚ್ಚಿ ಹೊರಗೆ ಬಂದು, ಇನ್ನೈದು ನಿಮಿಷದ ನಂತರ ಒಲೆ ಆರಿಸಿದರೆ ಸಾಕು. ಇದಕ್ಕೆ ಪಾಕ ಶಾಸ್ತ್ರಜ್ಞರ ಬೆಂಬಲವಿಲ್ಲದಿದ್ದರೂ (ನನ್ನ ಬ್ರಹ್ಮಚಾರಿ ಜೀವನದ ಅನುಭವದ ಪ್ರಕಾರ) ರುಚಿ ಏನೂ ಕೆಡುವುದಿಲ್ಲ......

ಶ್ರೀಮಾನ್

ಬುಧವಾರ ಮಧ್ಯಾಹ್ನ 12 ಗಂಟೆ.

...ನಿಮ್ಮ ವಿಧಾನ ಅಷ್ಟೇನೂ ಪ್ರಾಕ್ಟಿಕಲ್ ಆಗಿಲ್ಲ. ಸೀದು ಹೋಗುತ್ತದೆ ಎಂದು ಅನುಮಾನ. ಬೇರೆ ಏನಾದರೂ 'ಉಪಾಯ' ಇರಬಹುದು......

ಶ್ರೀಮತಿ

ಬುಧವಾರ ಸಂಜೆ 6–00

...ಈ ದಿನ ಸಂಜೆ ಆದೇ ಕೆಲಸವಾಗಿ ಬದನೆಕಾಯಿ ತಂದು ನನ್ನ ವಿಧಾನ ದಿಂದ ಪಲ್ಯ ಮಾಡಿದ್ದೇನೆ.

ಶ್ರೀಮಾನ್

ಗುರುವಾರ ಮಧ್ಯಾಹ್ನ ಮೂರು ಗಂಟೆ.

...ಪಲ್ಯ ತುಂಬಾ ರುಚಿಯಾಗಿದೆ. ನಾನು ನಿನ್ನೆಯೇ ಹೇಳಿದ್ದೆ. ಬೇರೆ

'ಉಪಾಯ'ದಿಂದಲೂ ಬದನೆಕಾಯಿ ಪಲ್ಯ ತಿನ್ನಬಹುದು (ಮಾಡಬಹುದು ಅಲ್ಲ) ಎಂದು...

ಶ್ರೀಮತಿ

ಗುರುವಾರ ಸಾಯಂಕಾಲ 6–00

...ನಾನು ಬರೆದಿರುವ "ಸ್ವತಃ ಒಲೆಯ ಮುಂದೆ ಬೇಯದೆ ಪಲ್ಯ ಮಾಡುವ ವಿಧಾನ"ಕ್ಕೆ ಒಂದು ಷರಾ—ಇದರಲ್ಲಿ ಬೇರೆಯವರಿಂದ ಪಲ್ಯ ಮಾಡಿಸಿಕೊಳ್ಳುವುದು ಸೇರಿಲ್ಲ. ಅದು ಹೋಟೆಲಿನಿಂದ ತಂದ ಲೆಕ್ಕಕ್ಕೆ ಸೇರುತ್ತದೆ...

ಶ್ರೀಮಾನ್

ಗುರುವಾರ ರಾತ್ರಿ 12 ಗಂಟೆ.

.. ಗಂಡ ಎಂದರೆ ಬೇರೆಯವರೇ ?...

ಶ್ರೀಮತಿ



---

ಕೆರೆಯಲ್ಲಿ ಸ್ನಾನಕ್ಕಿಳಿದಿದ್ದ ಗ್ರಾಮದ ಗಾಣಗಿತ್ತಿ ಮುಖವನ್ನೆಲ್ಲಾ ಸಾಬೂನು ತಿಕ್ಕಿ ತೊಳೆಯುತ್ತಿದ್ದಳು.

"ಇದೇನೇ ಅರು ಮಕ್ಕಳಾದ ಮೇಲೂ ಈ ಪಾಟಿ ಮುಖ ತಿಕ್ತಾ ಇದಿ" ಪಕ್ಕದವಳು ಕೇಳಿದಳು.

"ಮುಖ ನೆರಿಗಟ್ಟಿರಬಹುದು, ಅಂತ ಅನುಮಾನ ಬಂತು. ಅದಕ್ಕೆ ತಿಕ್ತಿದೀನಿ. ಈಚೀಚೆಗೆ ಎಣ್ಣೆ ಕೊಂಡ ಗಂಡಸ್ರೆಲ್ಲಾ ಕೊಟ್ಟ ಚಿಲ್ರೆನ ಎಣಿಸುಕ್ಕೆ ಶುರು ಮಾಡಪ್ರೆ" ಅಂದಳು ಗಾಣಗಿತ್ತಿ.

---

# ಶಂಕರಪ್ಪನ ಜಾನಪದ ಗೋಷ್ಠಿ

—ಬಿ. ಮಾಲಿನಿ ಮಲ್ಯ

---

ಶಂಕರಪ್ಪ ನನ್ನ ಬಾಲ್ಯ ಸ್ನೇಹಿತ; ನನ್ನ ಸಹಪಾಠಿ ಕೂಡ. ಗೆಳೆಯರಾದ ನಮ್ಮೆಲ್ಲರ ಬಾಯಿಯಲ್ಲಿ ಶಂಕ್ರೂ ಅಂದರೆ ಅವನೇ. ಮೊನ್ನೆ ತಾನೇ ಜಾನಪದ ಸಾಹಿತ್ಯ ಸಂಶೋಧನೆಗಾಗಿ ಡಾಕ್ಟರೇಟು ಪಡೆದ ಮೇಲೆ. ಶಂಕರಪ್ಪ ಹೋಗಿ, ಡಾ || ಶಂಕರ ರಾವ್ ಎಂಬುದಾಗಿ ತನ್ನ ಹೆಸರನ್ನು ಸಹ ಬದಲಾಯಿಸಿಕೊಂಡಿದ್ದಾನೆ. ಆ ಡಾಕ್ಟರೇಟಿನ ಕತೆ ಮಾತ್ರ ತುಂಬ ಸ್ವಾರಸ್ಯದ್ದು. ಅದೇನಂತೀರಾ ?

ನಮ್ಮ ಶಂಕ್ರೂ ಬಾಲ್ಯದಿಂದಲೂ ಓದಿನಲ್ಲಿ ಅಷ್ಟಕ್ಕಷ್ಟೇ. ಹಾಗೂ ಹೀಗೂ ಕಾಲೇಜಿನ ಮೆಟ್ಟಿಲನ್ನು ಹತ್ತಿ, ಅರ್ಥಶಾಸ್ತ್ರದಲ್ಲಿ ಬಿ. ಎ. ಪದವಿ ಗಳಿಸಲು ಅವನು ಮಾಡಿದ 'ಸಾಹಸ' ಅಷ್ಟಿಷ್ಟಲ್ಲ, ಯಾರ್ಯಾರನ್ನೋ ಹಿಡಿದು ಮಾಮೂಲು ('ಮಾಮೂಲು' ಎನ್ನುವ ಪದಕ್ಕೆ "ಆಸುರೀಗನ್ನಡಂ ಗೆಲ್ಗೆ" ಅರ್ಥಕೋಶದಲ್ಲಿ 'ಲಂಚ' ಎನ್ನುವ ಅರ್ಥವನ್ನು ಕೊಡಲಾಗಿದೆ) ಕೊಟ್ಟು, ಮಾರ್ಕ್ಸ್ ಹಾಕಿಸಿಕೊಂಡು, ಅರ್ಥ ಶಾಸ್ತ್ರದಲ್ಲಿ ಪದವಿ ಗಳಿಸಿದ್ದಾನೆ. ಅರ್ಥ ಶಾಸ್ತ್ರವೆಂದರೆ ಅವನಿಗೆ ಪ್ರಾಣ. ಯಾವ ಅರ್ಥ ಶಾಸ್ತ್ರವೆಂದು ತಿಳಿದಿದ್ದೀರಿ ? ಪುಸ್ತಕದ ಬದನೆಕಾಯಿಯ ಅರ್ಥ ಶಾಸ್ತ್ರವಲ್ಲ! ನಾವೂ, ನೀವೂ ಜೀವ ಹಿಡಿದುಕೊಂಡು ಬದುಕಲು—ಗಾಳಿ, ನೀರಿನಂತೆ ಅತೀ ಆವಶ್ಯಕವಾಗಿರುವ "ಅರ್ಥ"ದ ಕುರಿತು ಅವನಿಗೆ ವಿಶೇಷವಾದ ಆಸಕ್ತಿ. ಯಾವ್ಯಾವ ಲೆಕ್ಕಾಚಾರ ಹಾಕಿದರೆ, ಎಷ್ಟೆಷ್ಟು ಅರ್ಥವನ್ನು ಸಂಪಾದಿಸಬಹುದು; ಯಾವ್ಯಾವ ಬೃಹತ್ ಯೋಜನೆಗಳನ್ನು ಹಮ್ಮಿಕೊಂಡರೆ ಎಷ್ಟೆಷ್ಟು ಸಂಭಾವನೆ ಕಿಸೆಗೆ ಬಿದ್ದೀತು ಎನ್ನುವ ಲೆಕ್ಕಾಚಾರಕ್ಕೆ ಸಂಬಂಧಿಸಿದ್ದು. ಇಷ್ಟು ಮಾತ್ರವಲ್ಲ. ಯಾವ್ಯಾವ "ವೇಷ" ತೊಟ್ಟರೆ ಏನೇನು ಚಡಾವುಗಳಿವೆ—ಎನ್ನುವ ದೂರದರ್ಶಿ ಯೋಜನೆಗೆ ಸಂಬಂಧಿಸಿದ್ದು.

ನಮ್ಮೂರಿನ ಸಂಕಪ್ಪ ಮಾಸ್ತರರಿಗೆ, ಮಾಸ್ತರಿಕೆಯ ಜತೆಯಲ್ಲಿ ಜಾನಪದದ ಗೀಳು ಬೇರೆ ಅಂಟಿಕೊಂಡಿದೆ. ಭತ್ತ ಕುಟ್ಟುವ ಹಾಡು, ನೇಜಿ ನೆಡುವ ಹಾಡು, ಭೂತಗಳ ಕೋಲ, ನೇಮಗಳಿಗೆ ಸಂಬಂಧಿಸಿದ ಹಾಡು, ಇನ್ನೇನೋ ಒಂದಿಷ್ಟು ಜಾನಪದ ಹಾಡುಗಳನ್ನು ಸಂಗ್ರಹಿಸಿದ್ದರು. ನಮ್ಮ ಶಂಕ್ರೂ ತಲೆಗೆ. ತಾನೂ ಒಬ್ಬ ಜಾನಪದ ವಿದ್ವಾಂಸನಾಗಬಾರದೇಕೆ ಎನ್ನುವ ಆಲೋಚನೆ ಬಂದಿತು. ಅದರ ಕುರಿತು ಮಾಹಿತಿ ಗಳಿಸಲು, ಒಂದು ಸಂಜೆ ಸಂಕಪ್ಪ ಮಾಸ್ತರರನ್ನು ಭೇಟಿಯಾದ

ವನೇ, "ಮೂಸ್ತರರೇ, ನೀವೇನೋ ಜಾನಪದ ಹಾಡುಗಳನ್ನು ಸಂಗ್ರಹಿಸಿದ್ದೀರಂತೆ. ಒಂದಿಷ್ಟು ಕಣ್ಣುಹಾಯಿಸಿ ಕೊಡುತ್ತೇನೆ" ಎಂದು ಹೇಳಿ ಒಯ್ದುವನು. ಅದನ್ನೇ ತನ್ನ ಹೆಸರಿನಲ್ಲಿ ಯೂನಿವರ್ಸಿಟಿಗೆ ಒಪ್ಪಿಸಿ, ಡಾಕ್ಟರೇಟು ಸಂಪಾದಿಸಿಯೇ ಬಿಟ್ಟ!

ನಮ್ಮ ಶಂಕ್ರೂ, ಡಾ॥ ಶಂಕರ ರಾವ್ ಆದದ್ದು ಹೀಗೆ ! ಜಾನಪದ ವಿದ್ವಾಂಸನಾದ ಮೇಲೆ ಸುಮ್ಮನೆ ಕುಳಿತರೆ ಹೇಗಾದೀತು ? ಯಾವುದಾದರೂ ರಚನಾತ್ಮಕ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕೆಂದು ಅವನಿಗೆ ಮನಸ್ಸಾಯಿತು. "ಜಾಗತಿಕ ವೇದಿಕೆಯ ಮೇಲೆ ವಿಜೃಂಭಿಸಲು ಸರ್ವ ಯೋಗ್ಯತೆಯನ್ನು ಗಳಿಸಿಕೊಂಡಿದೆ ನಮ್ಮ ಕಂಬಳ" ಎಂದು ಇತ್ತೀಚೆಗೆ ಜಾನಪದ ವಿದ್ವಾಂಸರೊಬ್ಬರು ದಿನಪತ್ರಿಕೆಯಲ್ಲಿ ಘೋಷಿಸಿದ್ದನ್ನು ಅವನು ಓದಿದ್ದ, "ವರ್ಷವಿಡೀ ಬಕಾಸುರನಂತೆ ತಿಂದು, ಕೊಬ್ಬಿ ಬೆಳೆದ ಕೋಣಗಳು, ಬೆನ್ನಿನ ಮೇಲೆ ಬಾರುಕೋಲಿನಿಂದ ಬಾರಿಸಿದ ಕೂಡಲೇ ಓಟ ಹೂಡುವುದೇನು ಮಹಾ? ಕೊಬ್ಬಿದ ಕೋಣಗಳ ಓಟದ ಆಟವೇ ಮಹಾ ದೊಡ್ಡ ಜಾನಪದ ಕಲೆಯಾಗುವುದಾದರೆ, ನಮ್ಮೂರಿನ ಕೋಳಿ ಅಂಕ ಜಾಗತಿಕ ಜಾನಪದ ಕಲಾ ವೇದಿಕೆಯನ್ನು ಯಾಕೆ ಹತ್ತಬಾರದು ?" ಎನ್ನುವ ಹೊಸ ಆಲೋಚನೆಯೊಂದು ಶಂಕ್ರೂ ತಲೆಯಲ್ಲಿ ಹುಟ್ಟಿಕೊಂಡಿತು. ಕೂಡಲೇ ಕಾರ್ಯಪ್ರವೃತ್ತನಾದ. ರಾಜಧಾನಿ ಎಕ್ಸ್‌ಪ್ರೆಸ್ಸನ್ನು ಹತ್ತಿ, ರಾಜಧಾನಿಯಲ್ಲಿ 15 ದಿನ ಬಿಡಾರ ಹೂಡಿದ. ಶಾಸಕರು, ಮಂತ್ರಿಗಳನ್ನು ಭೇಟಿಯಾದ. ತನ್ನ ಯೋಜನೆಯ ವಿವರಗಳನ್ನು ಅವರಿಗೆ ಮನದಟ್ಟು ಮಾಡಿದ. ಕೊನೆಗೆ 50 ಸಾವಿರ ರೂಪಾಯಿಗಳ ಗ್ರಾಂಟನ್ನು ಕುದುರಿಸಿಕೊಂಡೇ ಊರಿಗೆ ಹಿಂದಿರುಗಿದ. ಅದರಲ್ಲಿ ಸ್ವಲ್ಪ ಹಣವನ್ನು ಗ್ರಾಂಟು ಕೊಡಿಸಿದವರ ಮುಂದೆ ಚೆಲ್ಲಬೇಕಾಯಿತೆಂಬುದನ್ನು ಬಿಡಿಸಿ ಹೇಳಿದರೆ ಚಂದವಾಗದು.

ಊರಿಗೆ ಹಿಂದಿರುಗಿದವನೇ ಕೋಳಿ ಅಂಕದ ಪ್ರಚಂಡ ವೀರರಾದ ಬಿರುಮು, ತನಿಯ, ಸೋಮರನ್ನು ಭೇಟಿಯಾದ. ಇಂಥ ದಿನ, ಇಂಥ ಹೊತ್ತಿಗೆ, ಅಮ್ಮನವರ ದೇವಸ್ಥಾನಕ್ಕೆ ತಮ್ಮ ತಮ್ಮ ಕೋಳಿ ಸಮೇತರಾಗಿ ಹಾಜರಾಗಬೇಕೆಂದು ತಿಳಿಸಿದ. ಅಲ್ಲಿ ಅವರಿಗೆ "ಭರ್ಜರಿ ಊಟ ಕೊಡಿಸುವೆ; ಫೋಟೋ ತೆಗೆಯಿಸಿ ಪೇಪರಿನಲ್ಲಿ ಹಾಕಿಸುವೆ"ನೆಂದಾಗ ಬಿರುಮು, ತನಿಯಾದಿಗಳ ಮುಖ ಮೊರೆದಗಲವಾಯಿತೆಂದು ಬೇರೆ ಹೇಳಬೇಕಾಗಿಲ್ಲ. "ಇಂಥ ದಿನ ಅಮ್ಮನವರ ದೇವಸ್ಥಾನದಲ್ಲಿ ನಮ್ಮೂರಿನ ಜಾನಪದ ಕಲೆಯಾದ ಕೋಳಿ ಅಂಕದ ಕುರಿತು ಜಾನಪದ ಗೋಷ್ಠಿಯೊಂದನ್ನು ಇರಿಸಿಕೊಂಡಿದ್ದೇವೆ. ಜಾನಪದ ಕಲಾ ಪ್ರೇಮಿಗಳು, ಜಾನಪದ ಕಲಾವಿದರೆಲ್ಲ ಹೆಚ್ಚಿನ ಸಂಖ್ಯೆಯಲ್ಲಿ ಹಾಜರಾಗಿ ನಮ್ಮ ಗೋಷ್ಠಿಯನ್ನು ಚಂದಗಾಣಿಸಿ ಕೊಡಬೇಕಾಗಿ ವಿನಂತಿ. ನಮ್ಮೂರಿನ ಈ ಕಲಾ ಸಂಪತ್ತು ಜಾಗತಿಕ

ವೇದಿಕೆಯ ಮೇಲೆ ರಾರಾಜಿಸುವಂತೆ ತಾವೆಲ್ಲ ಬದ್ಧಕಂಕಣರಾಗಿ ದುಡಿಯಲು ಮನಸ್ಸು ಮಾಡಬೇಕು" ಎಂದು ದಿನಪತ್ರಿಕೆಯಲ್ಲಿ ಜಾಹೀರು ಪಡಿಸಿದ. ಅಮ್ಮನವರ ದೇಗುಲದ ಮೊಕ್ತೇಸರರನ್ನು ಭೇಟಿಯಾಗಿ ಗೋಷ್ಠಿ ನಡೆಸಲು ಒಂದು ದಿನದ ಮಟ್ಟಿಗೆ ಕಲ್ಯಾಣ ಮಂದಿರವನ್ನು ಪುಕ್ಕಟೆಯಾಗಿ 'ಬುಕ್ಕು ಮಾಡಿಸಿದ. ದೇಗುಲದ ಮೊಕ್ತೇಸರರನ್ನು ಆ ದಿನ ಹಾರ ಹಾಕಿ ಗೌರವಿಸುವುದಾಗಿ ಘೋಷಿಸಿದ ಕೂಡಲೇ ಧರ್ಮದರ್ಶಿಗಳು ಗೋಷ್ಠಿಯ ನಂತರದ ಭೂರಿ ಭೋಜನದ ವ್ಯವಸ್ಥೆಯನ್ನು ಧರ್ಮಾರ್ಥವಾಗಿ ನಡೆಯಿಸಿಕೊಡುವೆನೆಂದು ಸಾರಿಯೇ ಬಿಟ್ಟರು!

ಗೋಷ್ಠಿಯ ದಿನ ಬಂತು. ಕ್ಲಪ್ತ ಕಾಲಕ್ಕೆ ಬಿರುಮ, ತನಿಯಾದಿಗಳು ತಮ್ಮ ತಮ್ಮ ಬಾಳು, ಕೋಳಿಗಳ ಸಮೇತ ಅಮ್ಮನವರ ದೇಗುಲದ ಕಲ್ಯಾಣ ಮಂದಿರದಲ್ಲಿ ಹಾಜರಾದರು. ಶಂಕ್ರೂ ಆ ದಿನದ ಗೋಷ್ಠಿಗೆ ಸಂಕಪ್ಪ ಮಾಸ್ತರರನ್ನೇ ಅಧ್ಯಕ್ಷತೆಗೆ ಒಪ್ಪಿಸಿದ ! ತನ್ನ ಸೊತ್ತನ್ನೇ ಕದ್ದು ಡಾಕ್ಟರೇಟು ಸಂಪಾದಿಸಿದ್ದ ಶಂಕರಪ್ಪನ ಹೆಸರು ಹೇಳಿದರೆ ಕೆಂಡವಾಗುತ್ತಿದ್ದ ಸಂಕಪ್ಪ ಮಾಸ್ತರರ ಸಿಟ್ಟೆಲ್ಲ ಕರಗಿ ಹೋಯಿತು. ಅವರೂ ಸಮಾರಂಭ ತೊಡಗಲು ಒಂದು ಘಂಟೆ ಇರುವಾಗಲೇ ಅಮ್ಮನವರ ದೇಗುಲದ ಕಲ್ಯಾಣ ಮಂದಿರದಲ್ಲಿ ಹಾಜರು ! ಸಮಾರಂಭದ ಪೂರ್ವಭಾವಿಯಾಗಿ ಜಾನಪದ ವಿದ್ವಾಂಸನಾದ ಶಂಕರಪ್ಪನ ಘನ ನೇತೃತ್ವದಲ್ಲಿ ಕೋಳಿ ಅಂಕದ ಅಧ್ವರ್ಯುಗಳನ್ನು ಮೆರವಣಿಗೆಯಲ್ಲಿ ಸಭಾಂಗಣಕ್ಕೆ ಕರೆದು ತರಲಾಯಿತು. ಜಾನಪದ ವಾದ್ಯಗಳಾದ ಕೊಂಬು, ಕಹಳೆಗಳ ಜತೆಯಲ್ಲಿ ಇತ್ತೀಚೆಗೆ ರಷ್ಯಾದಲ್ಲಿ ಜರುಗಿದ ಭಾರತ ಉತ್ಸವದಲ್ಲಿ ಜಯಭೇರಿಯನ್ನು ಹೊಡೆದಿದ್ದ ಶಂಖವನ್ನು ನಭೋಮಂಡಲಕ್ಕೆ ಮುಟ್ಟುವ ತೆರನಲ್ಲಿ ಊದಿದ್ದಾಯಿತು. ಜಾನಪದ ಉತ್ಸವವಾದುದರಿಂದ ಶಬ್ದಮಾಲಿನ್ಯದ ಕುರಿತು ಕೇಸು ಹಾಕಲು ಯಾರು ಮನಸ್ಸು ಮಾಡಲಿಲ್ಲ ! ಬಡಿದದ್ದೇ ತಾಳ, ಡೋಲು ಹೊರಡಿಸಿದ್ದೇನಾದ–ಎಂದು ದೃಢವಾಗಿ ನಂಬಿದ್ದ ಕೊರಗರ ಕುಪ್ಪ ಆವೇಶದಿಂದ ಡೋಲು ಬಾರಿಸಿದ್ದೇ ಬಾರಿಸಿದ್ದು ಯಾವುದೋ ಮಾರಿ ಜಾತ್ರೆ ಇರಬೇಕೆಂದು ಭಾವಿಸಿ, ಚಿಕ್ಕ ಮಕ್ಕಳೆಲ್ಲ ಗಪ್ಪುಚಿಪ್ಪು ! "ಕೋಳಿ ಅಂಕಕ್ಕೆ ಜಯವಾಗಲಿ" ಎನ್ನುವ ಉದ್ಘೋಷವು ಮುಗಿಲನ್ನು ಮುಟ್ಟುವಂತಿರಲು ಸಕಲ ವಿಜೃಂಭಣೆಯಿಂದ ಮೆರವಣಿಗೆಯು ಹೊರಟು, ದೇಗುಲವನ್ನು ತಲುಪಿತು. ಸಂಕಪ್ಪ ಮಾಸ್ತರರ ಘನ ಅಧ್ಯಕ್ಷತೆಯಲ್ಲಿ ಸಮಾರಂಭ ತೊಡಗಿತು. ವೇದಿಕೆಯ ಮೇಲೆ ಗೋಷ್ಠಿಯ ಅಧ್ವರ್ಯು ಡಾ॥ಶಂಕರ ರಾವ್‌ಯಾನೆ ಶಂಕ್ರೂ ಆಚೀಚೆ ಓಡಾಡುತ್ತಲೇ ಇದ್ದ. ದೇಗುಲದ ಧರ್ಮದರ್ಶಿ ಶಾಸ್ತ್ರಿಗಳೂ ವೇದಿಕೆಯ ಮೇಲೆ ರಾರಾಜಿಸಿದರು. ಹಿಂದಿನ ಸಾಲಿನಲ್ಲಿ ಬಿರುಮ, ತನಿಯಾದಿಗಳು ತಮ್ಮ, ತಮ್ಮ ಬಾಳು, ಕೋಳಿಗಳ ಸಮೇತ ಅಂಜುತ್ತ, ನಾಚುತ್ತ, ಸಗ್ಗಾಗದಂತೆ ಹಲ್ಲು ಕಿರಿಯುತ್ತ ಕುಳಿತುಕೊಂಡಿದ್ದರು. ಪ್ರಾರ್ಥನೆ, ಸ್ವಾಗತ ಭಾಷಣ ಮುಗಿದ ಮೇಲೆ ಮಾಲಾರ್ಪಣೆಯ

ಕಾರ್ಯಕ್ರಮವಿದ್ದಿತು. ದೇಶದಲ್ಲಿ ಭೀಕರ ಬರಗಾಲ ತಾಂಡವವಾಡುತ್ತಿರುವು ದರಿಂದ ಮಲ್ಲಿಗೆ ಹೂವಿನ ಹಾರವನ್ನಾಗಲೀ, ಗಂಧದ ಮಾಲೆಯನ್ನಾಗಲೀ ದುಡ್ಡು ಕೊಟ್ಟು ತರಿಸಲು ಶಂಕರಪ್ಪ ಮನಸ್ಸು ಮಾಡಲಿಲ್ಲ. ಬದಲಾಗಿ "ಜಾನಪದ ಕಂಪಿನಿಂ ಸೊಗಯಿಸುತಿರ್ದ ಮಿರಾಯಿ ಹೂವಿನ ಹಾರಗಳನ್ನು ಅಧ್ಯಕ್ಷರಿಗೆ, ಅತಿಥಿಗಳಿಗೆ ಮತ್ತು ಕಲಾವಿದರಿಗೆ ಸ್ವತಃ ಶಂಕರಪ್ಪನೇ ತೊಡಿಸಿದನು. ಕಾರ್ಯಕರ್ತರಲ್ಲೊಬ್ಬನು ಇಂಥ ಒಂದು ಮಹಾ ಉತ್ಸವವು ಹಳ್ಳಿಯ ಮೂಲೆಯೊಂದರಲ್ಲಿ ಜರುಗಲು ಕಾರಣಕರ್ತರಾದ ಡಾ॥ ಶಂಕರ ರಾವ್ ಅವರನ್ನು ಅಭಿನಂದಿಸಿ, ಅವರಿಗೂ ಮಾಲಾರ್ಪಣೆ ಮಾಡಿದ ಜಾನಪದ ಗೋಷ್ಠಿ ಸಮಿತಿಯ ಪರವಾಗಿ ! ತಮ್ಮ ಊರಿಗೆ ಗೌರವ ತರುವ ಈ ಗೋಷ್ಠಿಗೆ ತನ್ನ ಪಾಲಿನ ಅಭಿನಂದನೆಯನ್ನು ಸಲ್ಲಿಸಲು ಫೋಟೋಗ್ರಾಫರ್ ಪ್ರಸಾದ, ಧರ್ಮಾರ್ಥವಾಗಿ ಫೋಟೋ ತೆಗೆಯಲು ಒಪ್ಪಿದ್ದ. ಹಾಗಾಗಿ, ವೇದಿಕೆಯ ಮೇಲೆ ಗೋಷ್ಠಿಯ ಅಧ್ವರ್ಯು ಶಂಕ್ರೂ ಅತ್ತಿಂದಿತ್ತ ಓಡಾ ಡುತ್ತಾ ಜನರ ಗಮನ ಸೆಳೆದರೆ, ಸಭಾಂಗಣದಲ್ಲಿ ಫೋಟೋಗ್ರಾಫರ್ ಪ್ರಸಾದ ಕ್ಯಾಮರಾದೊಂದಿಗೆ ಅತ್ತಿಂದಿತ್ತ ಹಾರಾಡುತ್ತ ಜನರ ಗಮನ ಸೆಳೆದ. ಅಂದ ಹಾಗೆ, ಒಂದು ವಿಷಯ ಹೇಳಲು ಮರೆತೆ. ಆ ದಿನದ ಗೋಷ್ಠಿಗೆ ಸಭಾಸದರು ಮಾತ್ರ ಬೆರಳೆಣಿಕೆಯಷ್ಟಿದ್ದರು. ಕಾರಣ ತಮ್ಮನ್ನು ವಿದ್ಯಾವಂತರೆಂದು ಕರೆದುಕೊಳ್ಳುವವರಿಗೆ ಮಾಡಲು ಕೆಲಸವಿಲ್ಲದೆ, ಬೋಳು ಜಡ್ಡಿನ ಮೇಲೆ ಕೋಳಿ ಅಂಕ ನಡೆಯಿಸುವ ಮಂದಿಯ ಕುರಿತು ಅಭಿಮಾನವಿಲ್ಲದ್ದು ! "ಕಳ್ಳು, ಸಾರಾಯಿ ಕುಡಿದು ಜಗಳ ವಾಡುತ್ತ, ಕೋಳಿಗಳನ್ನು ಬಲಿಹಾಕುವ ಜೂಜಾಟವನ್ನು ಜಾನಪದ ಕಲಾಸಂಪತ್ತು ಎಂದು ಮೆರೆಯಿಸಲು ಹೊರಟಿದ್ದಾನೆ ದುಡ್ಡು ಮಾಡುವ ಪ್ಲ್ಯಾನು!" ಎಂಬು ದಾಗಿ ಶಂಕರಪ್ಪನ ಮೇಲೆ ನಂಜುಕಾರಿದ ವ್ಯಕ್ತಿಗಳು ಈ ಜಾನಪದ ಗೋಷ್ಠಿಗೆ ಸಾಕಷ್ಟು ಅಪಪ್ರಚಾರ ಮಾಡಿದ್ದರು ! ಯಾರೆಷ್ಟೇ ಅಪಪ್ರಚಾರ ಮಾಡಲಿ, ಜಾನ ಪದ ಕಲಾಮಾತೆಯ ಸೇವೆಗೆ ಬದ್ಧಕಂಕಣನಾಗಿದ್ದ ಶಂಕರಪ್ಪನ ದೃಢ ನಿಶ್ಚಯದಿಂದ ಗೋಷ್ಠಿ ಯಾನೆ ಉತ್ಸವ ನಾಂಗವಾಗಿ ನೆರವೇರಿತು. "ಜೈ ಕುಕ್ಕುಟೇಶ್ವರಾ !' ಎನ್ನುವ ಉದ್ಘೋಷದೊಂದಿಗೆ ಗೋಷ್ಠಿ ಬರ್ಖಾಸ್ತುಗೊಂಡಿತು. ನೆರೆದಿದ್ದ ಮಂದಿಗೆಲ್ಲ ಶಾಸ್ತ್ರಿಗಳು ಭೂರಿ ಭೋಜನವನ್ನು ಹಾಕಿಸಿದರು.

ಮರುದಿನದ ಪೇಪರಿನಲ್ಲಿ ಜಾನಪದ ಗೋಷ್ಠಿಯ ಕುರಿತು ರಂಗು ರಂಗಿನ ವರದಿ, ಫೋಟೋ ನಹಿತ ಅಚ್ಚಾಯಿತು. ಗೋಷ್ಠಿ ನಡೆಯಿಸಲು ಸರಕಾರ ಕೊಟ್ಟ ಗ್ರಾಂಟಿಗೆ ಆಡಿಟೆಡ್ ಅಂಕೌಟನ್ನು ಕ್ಲಪ್ತ ಕಾಲದಲ್ಲಿ ಸರಕಾರಕ್ಕೆ ಒಪ್ಪಿಸಲು ಡಾ॥ ಶಂಕರ ರಾವ್ ಮರೆಯಲಿಲ್ಲ!

